

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಎಂ.ಫಿಲ್.ಪದವಿಯ ಸಂಪ್ರಬಂಧ

# "ಮರಳಿ ಮಣ್ಣಿಗೆ ಸಾಂಸ್ಕೃತಿಕ ಅಧ್ಯಯನ"


ಸಂಶೋಧನಾ ವಿದ್ಯಾರ್ಥಿ

**ಆರ್. ರಾಮಮೂರ್ತಿ**

ಮಾರ್ಗದರ್ಶಕರು

**ಡಾ. ಹೆಚ್.ಎಸ್. ರಾಘವೇಂದ್ರರಾವ್**





**ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ**

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ

ಬೆಂಗಳೂರು

**2007-08**



ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಎಂ. ಫಿಲ್. ಪದವಿಯ ಸಂಪ್ರಬಂಧ

# "ಮರಳಿ ಮಣ್ಣಿಗೆ ಸಾಂಸ್ಕೃತಿಕ ಅಧ್ಯಯನ"


*ಸಂಶೋಧನಾ ವಿದ್ಯಾರ್ಥಿ*

**ಆರ್. ರಾಮಮೂರ್ತಿ**

*ಮಾರ್ಗದರ್ಶಕರು*

**ಡಾ. ಹೆಚ್.ಎಸ್. ರಾಘವೇಂದ್ರರಾವ್**









**ಎಂ.ವಿ.ಸೀ.ಸ್ನಾತಕೋತ್ತರ ಸಂಶೋಧನ ಕೇಂದ್ರ**

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ

ಬೆಂಗಳೂರು


**2007-08**

# ಅಭ್ಯರ್ಥಿಯ ಪ್ರಮಾಣ ಪತ್ರ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ 2007-2008ನೇ ಸಾಲಿನ ಎಂ. ಫಿಲ್. ಪದವಿಗಾಗಿ ''ಮುರಳಿ ಮಣ್ಣಿಗೆ ಸಾಂಸ್ಕೃತಿಕ ಅಧ್ಯಯನ'' ಎಂಬ ಸಂಪ್ರಬಂಧವನ್ನು ಡಾ. ಹೆಚ್.ಎಸ್. ರಾಘವೇಂದ್ರರಾವ್ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದೇನೆ.

ಈ ಸಂಪ್ರಬಂಧ ನನ್ನ ಸ್ವಂತ ಬರವಣಿಗೆ ಆಗಿದ್ದು ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ಸಹಿ

ದಿನಾಂಕ : ೨೪-೧೦-೨೦೦೮

ಸ್ಥಳ : ಬೆಂಗಳೂರು

ಆರ್. ರಾಮಮೂರ್ತಿ

(ಆರ್. ರಾಮಮೂರ್ತಿ)

# ಮಾರ್ಗದರ್ಶಕರ ಪ್ರಮಾಣಪತ್ರ

ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ.ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ 2007–2008ನೇ ಸಾಲಿನ ಎಂ.ಫಿಲ್. ಪದವಿಗಾಗಿ "ಮರಳಿ ಮಣ್ಣಿಗೆ' ಸಾಂಸ್ಕೃತಿಕ ಅಧ್ಯಯನ" ಎಂಬ ಸಂಪ್ರಬಂಧವನ್ನು ಆರ್.ರಾಮಮೂರ್ತಿ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.

ಈ ಸಂಪ್ರಬಂಧ ಅವರ ಸ್ವಂತ ಬರವಣಿಗೆ ಆಗಿದ್ದು ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ: ೧೮-೧೦-೨೦೦೮
ಸ್ಥಳ : ಬೆಂಗಳೂರು

ಸಹಿ

H. J. M

(ಡಾ.ಹೆಚ್.ಎಸ್.ರಾಘವೇಂದ್ರರಾವ್)

# ಪರಿವಿಡಿ

ಪುಟ ಸಂಖ್ಯೆ

# ಅಧ್ಯಾಯ - ೧

## ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

ಪ್ರಸ್ತುತ ಎಂ.ಫಿಲ್., ಸಂಪ್ರಬಂಧಕ್ಕಾಗಿ ಕಾರಂತರ 'ಮರಳಿಮಣ್ಣಿಗೆ' ಕಾದಂಬರಿಯನ್ನು ಸಾಂಸ್ಕೃತಿಕ ಅಧ್ಯಯನದ ಮೂಲಕ ಅವಲೋಕಿಸುವ ಕಾರ್ಯದಲ್ಲಿ ತೊಡಗಿದ್ದೇನೆ. ಸಾಮಾನ್ಯವಾಗಿ ಇದುವರೆಗೂ ''ಮರಳಿಮಣ್ಣಿಗೆ'' ಕಾದಂಬರಿಗೆ ಬಂದಿರುವ ವಿಮರ್ಶೆಗಳು ''ಸಾಹಿತ್ಯ ವಿಮರ್ಶೆಯ'' ನೆಲೆಯಲ್ಲಿ ಬಂದಿವೆ ಹೊರತು ಸಾಂಸ್ಕೃತಿಕ ನೆಲೆಗಳಲ್ಲಿ ಒಡಮೂಡಿಲ್ಲ.

ಹೀಗಾಗಿ ಬಹುಶಿಸ್ತಿನ ನೆಲೆಯಲ್ಲಿ ಕಾದಂಬರಿಯನ್ನು ಹೆಕ್ಕಿಕೊಂಡು ವಿಶಾಲವಾದ ಸ್ತರದಲ್ಲಿ (Universal) ಚಿಂತನೆ ನಡೆಸುವುದು ಪ್ರಸ್ತುತವಾಗಿ ಔಚಿತ್ಯವೆಂದು ತಿಳಿದು - ಆ ಚಿಂತನೆಗಳಲ್ಲಿ ದೃಷ್ಟಿಕೋನದಲ್ಲಿ ನಡೆಸುವ ಪ್ರಯತ್ನ ಮಾಡಿದ್ದೇನೆ.

ಫ್ರಾನ್ಸ್‌ನ ವಾಸ್ತವತಾವಾದಿ ಪರಂಪರೆ ಮತ್ತು ಇಂಗ್ಲೇಂಡಿನ ವಾಸ್ತವತಾವಾದಿ ಪರಂಪರೆ- ಈ ಹಿನ್ನೆಲೆಯಲ್ಲಿ 'ಫ್ರೆಂಚ್ ಮಹಾಕ್ರಾಂತಿ' ಮತ್ತು 'ಕೈಗಾರಿಕಾ ಕ್ರಾಂತಿ' ಇದೆ. ಅಂದರೆ ಹೊಸ ರಾಜಕೀಯ ಸಂಸ್ಕೃತಿ ಮತ್ತು ವಿಜ್ಞಾನ ಸಂಸ್ಕೃತಿಗಳಿಂದ 'ಹೊಸ ಆರ್ಥಿಕ ಸಂಸ್ಕೃತಿ' ಹುಟ್ಟಿಕೊಂಡಿತು. ಜಮೀನ್ದಾರಿ ಪದ್ಧತಿಯಿಂದ ಸಮಾಜದ ಒಳಗಿನ ಸತ್ವಗಳು ಬಂಡವಾಳಶಾಹಿ ವ್ಯವಸ್ಥೆಯತ್ತ ತಿರುಗಿದವು. ಈ ಸಂಘರ್ಷದ ಪ್ರಕ್ರಿಯೆಗಳೆ ಮುಂದೆ ವಾಸ್ತವತಾವಾದಿ ಪರಂಪರೆಗೆ ಪ್ರಧಾನ ಪ್ರೇರಣೆಗಳಾದವು.

ಏಷ್ಯಾ ಮತ್ತು ಆಫ್ರಿಕಾ ಖಂಡಗಳಿಗೆ ಆಧುನಿಕತೆ ಹೊರಗಿನಿಂದ ಬಂದದ್ದರಿಂದ ಉಂಟಾದ ಪರಿಣಾಮಗಳು ತುಂಬ ಸಂಕೀಣವಾಗಿವೆ. ಈ ಆಧುನಿಕತೆ ನಮಗೆ ಒಂದು ವರವೋ? ಶಾಪವೋ? ಎಂಬ ದ್ವಂದ್ವದಿಂದ ನಾವಿನ್ನು ತಪ್ಪಿಸಿಕೊಂಡಿಲ್ಲ. ಇಂತದ್ದೊಂದು ಸಾಂಸ್ಕೃತಿಕ ದ್ವಂದ್ವವೇ ತೃತೀಯ ಜಗತ್ತಿನ ಪ್ರಧಾನಧಾರೆಯ ಕಥಾ ಸಾಹಿತ್ಯದ ಮೂಲವಸ್ತುವಾಗಿದೆ. ಕೃತಿ ರಚನೆ ಮಾಡಿದ ಶ್ರೇಷ್ಠರಾದ ಲೇಖಕರು ಹೊಸ ವಾಸ್ತವತೆಯ ಸಮಸ್ತಪದರಗಳನ್ನು ಬಗೆದು ಶೋಧಿಸಿಬಿಡುವ, ವಿಶ್ಲೇಷಿಸುವ, ವೈಜ್ಞಾನಿಕತೆಗೆ ಗುರಿಪಡಿಸುವ ಮಹತ್ವಾಕಾಂಕ್ಷೆಯ ಹಿನ್ನೆಲೆಯಲ್ಲಿ ತಮ್ಮ ಸಾಹಿತ್ಯವನ್ನು ಸೃಷ್ಟಿಸಿದರು. ಈ ಐತಿಹಾಸಿಕ ಅನಿವಾರ್ಯತೆಯಿಂದಾಗಿ ವಾಸ್ತವವಾದಿ ಪರಂಪರೆ ಹುಟ್ಟಿಕೊಂಡಿತು.

ಈ ದೃಷ್ಟಿಯಿಂದ ಕಾರಂತರ ''ಮರಳಿಮಣ್ಣಿಗೆ'' ಕಾದಂಬರಿ ತೃತೀಯ ಜಗತ್ತಿನ ಪ್ರಧಾನಧಾರೆಯ ವಾಸ್ತವವಾದಿ ಸಾಲಿಗೆ ಸೇರುತ್ತದೆ.

೧೯ನೇ ಶತಮಾನದ ಉತ್ತರಾರ್ಧದಲ್ಲಿ ಭಾಷೆಯ ಹೊಸ ಸಾಧ್ಯತೆಗಳಿಗೆ ಮತ್ತು ಹೊಸ ಲೋಕಾನುಭವಗಳಿಗೆ ಈ ಓದುವ ವರ್ಗ ಸ್ಪಂದಿಸಿತು. ಭಾರತೀಯ ಸಮಾಜ ಅನೇಕ ವರ್ಷಗಳ ನಿಶ್ಚಲತೆ ಮತ್ತು ತಾಟಸ್ಥ್ಯಗಳಿಂದ ವೈಕೊಡವಿಕೊಂಡು ಚಲನಶೀಲವಾಗತೊಡಗಿತು. ಐತಿಹಾಸಿಕ ಸಂದರ್ಭದಲ್ಲಿ ಹಲವು ಶತಮಾನಗಳ ಸಾಹಿತ್ಯಕ ಇತಿಹಾಸ ಮತ್ತು ಪರಂಪರೆಗಳನ್ನು ಹೊಂದಿದ್ದ ಸಂಸ್ಕೃತಿಯೊಂದು ಜಡಗೊಂಡ ಸ್ಥಿತಿಯಿಂದ ಎಚ್ಚರಗೊಂಡಿತು. ಈ ಹಿನ್ನೆಲೆಯಲ್ಲಿ ಸಂಸ್ಕೃತಿಯ ಸಂಘರ್ಷ ಆರಂಭವಾಯಿತು.

ಕನ್ನಡದ ಮೊದಲ ಸಾಮಾಜಿಕ ಕಾದಂಬರಿಗಳಲ್ಲಿ ಸುಧಾರಣವಾದೀ ಚಳುವಳಿಗಳ ಪ್ರಭಾವ ಎದ್ದು ಕಾಣುತ್ತದೆ. ಧಾರ್ಮಿಕ ಮೂಢನಂಬಿಕೆಗಳ ಖಂಡನೆ ಸಾಂಸ್ಥಿಕ ಭ್ರಷ್ಟಾಚಾರಗಳ ಟೀಕೆ ಎದ್ದು ಕಾಣುತ್ತದೆ. ಉದಾರವಾದೀ, ಮಾನವತಾವಾದೀ ಮೌಲ್ಯಗಳ ಭಾವುಕ ಪುರಸ್ಕಾರ ಕಂಡುಬರುತ್ತದೆ. ಇಲ್ಲಿನ ಆದರ್ಶಗಳಿಗೆ ಭದ್ರವಾದ ವಾಸ್ತವಿಕ ನೆಲೆಗಟ್ಟು ಇಲ್ಲದಿದ್ದರೂ ಆಧುನಿಕ ಮೌಲ್ಯಗಳ ಸಂಪರ್ಕದಿಂದ ಚಲನಶೀಲವಾದ ಸಮಾಜವೊಂದನ್ನು ಕಾಣುತ್ತೇವೆ. ಇಂಗ್ಲಿಷ್ ಶಿಕ್ಷಣದ ಮೋಹವು ಹುಟ್ಟಿಕೊಂಡು ಭಾರತೀಯ ಧಾರ್ಮಿಕ ಅತಿರೇಕಗಳನ್ನು ಖಂಡಿಸುವ ಭಾರತೀಯ ಸಂಸ್ಕೃತಿಯನ್ನು ಉದ್ಧರಿಸುವ ಕಾರ್ಯವು ಆರಂಭವಾಗತೊಡಗಿತು.

ಈ ಹಿನ್ನಲೆಯಲ್ಲಿ ಕನ್ನಡದ ಮೊದಲ ಮುಖ್ಯ ಸಾಮಾಜಿಕ ಕಾದಂಬರಿಗಳಾದ ಗುಲ್ವಾಡಿ ವೆಂಕಟರಾಯರ 'ಇಂದಿರಾಬಾಯಿ (೧೮೯೯), ಬೋಳಾರ ಬಾಬುರಾವ್‌ರವರ 'ವಾಗ್ದೇವಿ'(೧೯೦೫) ಕೆರೂರು ವಾಸುದೇವಾಚಾರ್ಯರ ' ಇಂದಿರಾ'(೧೯೦೮), ಎಂ.ಎಸ್. ಪುಟ್ಟಣ್ಣನವರ 'ಮಾಡಿದ್ದುಣ್ಣೋ ಮಹಾರಾಯ' (೧೯೧೫) ಮುಖ್ಯವಾಗಿ ಹುಟ್ಟಿಕೊಂಡವು.

ಇದಕ್ಕೂ ಹಿಂದೆ ಗಳಗನಾಥ ಮತ್ತು ಬಿ. ವೆಂಕಟಚಾರ್ಯರು ತಮ್ಮ ಅನುವಾದಗಳಿಂದ ಭಾಷಾಂತರಗಳಿಂದ ಮತ್ತು ಐತಿಹಾಸಿಕ ಕಥನಗಳಿಂದ ಹೊಸದೊಂದು ಪ್ರಕಾರಕ್ಕೆ ಭಾಷೆಯನ್ನು ಸಜ್ಜುಗೊಳಿಸುವ, ಬಗ್ಗಿಸುವ ಮತ್ತು ಮಾರ್ಪಡಿಸುವ ಕಾರ್ಯವನ್ನು ಪ್ರಾರಂಭ ಮಾಡಿದರು. ಅನುವಾದ ಸಾಹಿತ್ಯ ಮತ್ತು ಪತ್ರಿಕೋದ್ಯಮ ಇವುಗಳಿಗೆ ಹೊಸದಾಗಿ ತೆರೆದುಕೊಂಡ ಓದುವ ವರ್ಗ ಹೊಸದಿಗಂತದತ್ತ ದೃಷ್ಟಿ ಹರಿಸತೊಡಗಿತು. ಕನ್ನಡ ಸಾಹಿತ್ಯದ ಸಹೃದಯತೆಯ ಹೊಸ ದಿಗಂತದ ಪಯಣ ಪರಿಮಿತವಾಗಿತ್ತು. ಅಲ್ಲಿಂದೀಚೆಗೆ

ಶ್ರೀ ಕಾರಂತರ ಕಿರುಕಾದಂಬರಿಗಳು, ಮನೋಹರ ಗ್ರಂಥಮಾಲೆಯ ಹಲವು ಕಾದಂಬರಿ ಕುಸುಮಗಳು ಅರಳಿ ತಮ್ಮ ಸೌರಭವನ್ನು ಎಲ್ಲೆಡೆಯಲ್ಲೂ ಸೂಸಿದವು.

''ಶ್ರೀ ಪುಟ್ಟಪ್ಪನವರ 'ಕಾನೂರು ಹೆಗ್ಗಡಿತಿ' ಒಂದೇ ಒಂದು ಕನ್ನಡಕ್ಕೆ ಮಹಾಕಾದಂಬರಿಯಾಗಿದ್ದಿತು. ಅದೊಂದು ಮಲೆನಾಡಿನ ಬಗ್ಗೆ ಮನೋಜ್ಞವಾಗಿ ಚಿತ್ರಿಸುವ ಉತ್ತುಂಗ ಗಿರಿಗಳಿಂದ ಕಾಡುಗಳ ಕಾವಣಗಳಿಂದ ಶೋಭಿಸುವ, ಹೊಳೆಗಳ ಹೊಳಪಿನಿಂದ, ಕಾಜಾಣ ಇತ್ಯಾದಿ ಪಕ್ಷಿಗಳಿಂದ ನಿನಾದವನ್ನು ಚಿಮ್ಮಿಸುವ ಮೂಕ ಪ್ರಾಣಿಗಳ ಸಂಸ್ಕೃತಿಯಿಂದ ರಂಜಿಸುವ ಅದರೊಂದಿಗೆ ಗೌಡರುಗಳ ಒಕ್ಕಲುತನದಿಂದ, ಕೆಳಸ್ತರ ಪಂಚಮರಿಂದ, ಲೌಕಿಕ ಅಲೌಕಿಕ ಜಗತ್ತಿನಿಂದ, ಅಧಿಕಾರ ದರ್ಪಗಳಿಂದ, ಮುಗ್ಧತೆಯ ಭಾವಗಳಿಂದ ಚಿತ್ರಿತವಾಗುವ ಕಲಾಕೃತಿ ಇದಾಗಿದೆ.

ಕಾನೂರಿನ ಬಗ್ಗೆ ಚಿತ್ರಿತವಾಗುವ ಕಥೆಯು ಮುತ್ತಳ್ಳಿ ಕುರುವಳ್ಳಿಯ - ಅರಳಿಕಟ್ಟೆ, ಬಯಲುಕೆರೆ ಇತ್ಯಾದಿ ಪ್ರದೇಶಗಳಿಗೆ ಪಸರಿಸಿ ವಸಾಹತುಶಾಹಿಯ ಹಿನ್ನೆಲೆಯಲ್ಲಿ ಹೂವಯ್ಯ ಮತ್ತು ಚಂದ್ರಯ್ಯಗೌಡರ, ಸೇರೆಗಾರರ, ಬೇಲರಬೈರ ಮುಂತಾದವರೊಂದಿಗೆ ನಡೆಯುವ ದೇಸೀಯತೆ ಮತ್ತು ವಸಾಹತುಶಾಹಿಯ ಮುಖಾಮುಖಿ ಅನುಸಂಧಾನವನ್ನು ಈ ಕಾದಂಬರಿಯಲ್ಲಿ ಕಾಣಬಹುದು.

ಹಾಗೆಯೇ ರಾವಬಹುದ್ದೂರರ 'ಗ್ರಾಮಾಯಾಣ' ಅರವತ್ತು ವರ್ಷಗಳ ಹಿಂದಿನ ಯಥಾವತ್ತಾದ ಜೀವನವನ್ನು ಚಿತ್ರಿಸುವ ಒಂದು ಗ್ರಾಮದ ಜೀವನ ಕಥೆಯಾಗಿದೆ. ಜೀವನವನ್ನು ನೈತಿಕತೆಯಿಂದ ಸಮಗ್ರವಾಗಿ ನೋಡುವ, ಸ್ಥೈರ್ಯತೆಯಿಂದ ಚಿತ್ರಿಸುವ ದಿನನಿತ್ಯದ ಅನೇಕ ಸಂಗತಿಗಳ ನಡುವೆ ಇರಬಹುದಾದ ಸಂಬಂಧವನ್ನು ಚಿತ್ರಿಸುತ್ತದೆ.

'ಗ್ರಾಮಾಯಣ' ಒಂದು ಅರ್ಥದಲ್ಲಿ ಇದೊಂದು ಶುದ್ಧ ಸಾಮಾಜಿಕ ಕಾದಂಬರಿ ಸಾರ್ವಜನಿಕ ಜೀವನವೇ ಇಲ್ಲಿನ ಕಾರ್ಯರಂಗ ಸುಮಾರು ನಲವತ್ತು-ನಲವತ್ತೈದು ವ್ಯಕ್ತಿಗಳು ಇಲ್ಲಿ ವ್ಯವಹರಿಸುವುದರಿಂದ ಯಾವೊಂದು ವ್ಯಕ್ತಿಯ ಕೌಟುಂಬಿಕ ವಿವರಗಳು ಸ್ಪಷ್ಟವಾಗಿ ದೊರೆಯಲಾರವು.

ಈ ಕಾದಂಬರಿಯು ಮುಖ್ಯವಾಗಿ 'ಪಾದಳ್ಳಿಯ' ದುರಂತ ಕಥೆಯಾಗಿದೆ. 'ಪಾದಳ್ಳಿಯು' ಇಡೀ ಕಾದಂಬರಿಯ ಸ್ಥಿತಿಗತಿಗಳ ಅವನತಿಗಳಿಗೆ ಜೀವನಾಡಿಯಂತಿದೆ.

೧೯೪೨ರಲ್ಲಿ ರಚಿತವಾದ ಕಾರಂತರ ಕಾದಂಬರಿಯು 'ಮೂರು ತಲೆಮಾರುಗಳ ಕಥೆಯನ್ನು ಮನೋಜ್ಞವಾಗಿ ಚಿತ್ರಿಸುತ್ತದೆ. ೧೮೩೦ರ ಸುಮಾರಿಗೆ ತೊಡಗುವ ಈಕಥೆಯು

೧೯೪೦ ರಲ್ಲಿ ಮುಗಿಯುತ್ತದೆ. ಅಂದರೆ ಈ ಕಾದಂಬರಿಯು ಸ್ವಾತಂತ್ರ್ಯ ಪೂರ್ವದ ಕೃತಿಯಾಗಿದೆ. ಈ ಕಥೆಯು ಸಾಮಾಜಿಕ ಬದಲಾವಣೆಯ ಮೂರು ಘಟ್ಟಗಳನ್ನು ಸೂಚಿಸುತ್ತದೆ.

'ಮರಳಿಮಣ್ಣಿಗೆ' ಕಾದಂಬರಿಯ ವಸ್ತುವಿನ ಬಗೆಗೆ ಬರೆಯುತ್ತ ಕಾರಂತರು ಮೊದಲ ಮಾತಿನಲ್ಲಿ ''ನನ್ನ ಊರಿನ ಬಡತನದ ಬಾಳ್ವೆಯ ಕತೆಯ ವಸ್ತುವಾಗಿದೆ. ಈ ಬಾಳ್ವೆಯ ಪ್ರಶ್ನೆ ಈ ಮೂರು ತಲೆಮಾರುಗಳಲ್ಲಿ ಹೇಗೆ ಪ್ರತ್ಯುತ್ತರಗೊಳ್ಳುತ್ತದೆ ಎಂಬುದು ಇದರಲ್ಲಿ ಚಿತ್ರಿಸಲ್ಪಟ್ಟಿದೆ ಎಂದಿದ್ದಾರೆ.

ನನ್ನ ಅಧ್ಯಯನದ ವ್ಯಾಪ್ತಿಯು ಎಂಟು ಅಧ್ಯಾಯಗಳಿಂದ ಕೂಡಿದೆ.

ಈ ಅಧ್ಯಾಯಗಳಲ್ಲಿ 'ಮರಳಿ ಮಣ್ಣಿಗೆ' ಕಾದಂಬರಿಯೊಂದಿಗೆ ಕುವೆಂಪುರವರ 'ಕಾನೂರು ಹೆಗ್ಗಡಿತಿ', ರಾವ್ ಬಹದ್ದೂರರವರ 'ಗ್ರಾಮಾಯಣ' ಸಾಂಸ್ಕೃತಿಕವಾಗಿ ಚರ್ಚಿಸಲು ಪ್ರಯತ್ನಿಸಿದ್ದೇನೆ.

ಕಾರಣ, ಈ ಎರಡು ಕಾದಂಬರಿಗಳೂ ಸಹ ಸ್ವಾತಂತ್ರ್ಯಪೂರ್ವದ ಕಾಲಘಟ್ಟದಲ್ಲಿ ಆಯಾಯ ಪ್ರಾದೇಶಿಕ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಚಿತ್ರಿತವಾಗಿವೆ. ಹೀಗಾಗಿ ಇವೆರಡನ್ನು 'ಮರಳಿ ಮಣ್ಣಿಗೆ' ಕಾದಂಬರಿಯೊಂದಿಗೆ ಹೋಲಿಸುವುದರ ಮೂಲಕ ಅದರ ವಿಕಾಸ ಮತ್ತು ಇತಿಮಿತಿಗಳನ್ನು ತಿಳಿಯಲು ಇಚ್ಛಿಸುತ್ತೇನೆ.

ದೇಸಿ ಸಂಸ್ಕೃತಿಯ ಮುಖಾಂತರ ಅನ್ಯ ಸಂಸ್ಕೃತಿಯ ಮುಖಾಮುಖಿಯಾಗುವ ಬಗೆ - ಒಂದು ದೃಷ್ಟಿಕೋನ ಅನ್ಯ ಸಂಸ್ಕೃತಿಯನ್ನು ಮುಖಾಮುಖಿಯಾಗುವ ಮುಖಾಂತರ ದೇಸಿಯ ಎಳೆಗಳನ್ನು ಹಿಡಿಯುವ ದೇಸಿಯ ನೆಲೆಯನ್ನು ಕಂಡುಕೊಳ್ಳುವ ಮತ್ತು ದೇಸಿಯ ಗಟ್ಟಿತನವನ್ನು ಹುಡುಕುವ ನಿಟ್ಟಿನಲ್ಲಿ ಅನುಸಂಧಾನ ಇನ್ನೊಂದು ದೃಷ್ಟಿಕೋನ- ಹೀಗೆ ಎರಡು ದೃಷ್ಟಿಕೋನಗಳಲ್ಲಿ ಚರ್ಚೆ.

ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣಿನ ಶೋಷಣೆ ನಡೆಯುವುದಾದರೆ ಕಾದಂಬರಿಯೊಳಗಡೆ ಯಾವ ರೀತಿ ಹೆಣ್ಣಿನ ಪಾತ್ರಗಳು ಪುರುಷನ ಸಮಾಜದಲ್ಲಿ ಸಿಲುಕಿ ಶೋಷಣೆಗೊಳಗಾಗಿ ಬಲಿಪಶುಗಳಾಗುತ್ತವೆ ಎನ್ನುವುದನ್ನು ಮುಖ್ಯ ಪಾತ್ರ ಮತ್ತು ಅಂಚಿನ ಪಾತ್ರಗಳ ಮುಖಾಂತರ ಚರ್ಚೆ.

ಹಾಗೆಯೇ ಕಾಲಘಟ್ಟದಲ್ಲಿ ಹೆಣ್ಣು ಹೋರಾಟ ಮಾಡುವುದಾದರೆ ಕಾದಂಬರಿಯೊಳಗೆ ಯಾವ ಪಾತ್ರಗಳು ಹೇಗೆ ಹೋರಾಟ ಮಾಡುತ್ತವೆ. ಅವುಗಳು ಅಸ್ತಿತ್ವ ಉಳಿಸಿಕೊಳ್ಳುವುದಕ್ಕಾಗಿ ಎದುರಿಸುವ ಸಮಸ್ಯೆಗಳೇನು ಎನ್ನುವುದು ಚರ್ಚೆ.

ಕೇಂದ್ರಪಾತ್ರಗಳು ತಮ್ಮ ಅಸ್ತಿತ್ವವನ್ನು ಹುಡುಕಿಕೊಳ್ಳುವ ನಿಟ್ಟಿನಲ್ಲಿ ತಮ್ಮ ಸುತ್ತಲೂ ಹೆಣೆದುಕೊಳ್ಳುವ ಸಂಬಂಧಗಳು ಎಂತಹವು ? ಅವುಗಳಿಗೆ ಎದುರಾಗುವ ಸಮಸ್ಯೆಗಳೇನು ? ಅರಳಿದ ಅಂಚಿನ ಪಾತ್ರಗಳೊಂದಿಗೆ ಅವು ಯಾವ ರೀತಿ ಪ್ರತಿಕ್ರಿಯಿಸುತ್ತವೆ ? ಎಂಬುದನ್ನು ಚರ್ಚಿಸುವ ಮತ್ತು ಇದರೊಂದಿಗೆ ಕಾಲಘಟ್ಟದ ವೈಶಿಷ್ಟ್ಯತೆಯನ್ನು ಚರ್ಚಿಸುವೆ.

ಕಾದಂಬರಿಯಲ್ಲಿ ಕಂಡುಬರುವ ಪಾತ್ರಗಳು ತಮ್ಮ ಜೀವವನ್ನು ಉಳಿಸಿಕೊಳ್ಳುವ ಕ್ರಿಯೆಯೊಳಗೆ ಯಾವ ರೀತಿ ನೈತಿಕ ಮೌಲ್ಯಗಳನ್ನು ಪ್ರತಿಪಾದಿಸುತ್ತವೆ ಎನ್ನುವುದರ ಬಗ್ಗೆ ಚರ್ಚಿಸುವೆ.

ಹಾಗೆಯೇ ಪಾತ್ರಗಳು ಜೀವನದ ನೈತಿಕ ಮೌಲ್ಯಗಳನ್ನು ಪ್ರತಿಪಾದಿಸುತ್ತವೆ ಎನ್ನುವುದರ ಬಗ್ಗೆ ಚರ್ಚಿಸುವೆ.

ಹಾಗೆಯೇ ಪಾತ್ರಗಳು ಮಾನವೀಯ ಸಂಬಂಧಗಳನ್ನು ಉಳಿಸಿಕೊಳ್ಳಲು ಯಾವ ರೀತಿ ಹೊಣೆಗಾರಿಕೆಯನ್ನು ನಿಭಾಯಿಸುತ್ತವೆ. ನಿಭಾಯಿಸುವ ನಿಟ್ಟಿನಲ್ಲಿ ಆ ಪಾತ್ರಗಳೇ ಎದುರಾಗುವ ಎಡರುತೊಡರುಗಳೇನು ? ಎಂಬುದನ್ನು ಚರ್ಚಿಸುವೆ.

ಕೃತಿಯು ಭಾಷೆಯ ಮುಖಾಂತರ ಹರಿದರೂ ಕಾಲಘಟ್ಟದಲ್ಲಿ ಕೃತಿಯು ಯಾವ ಭಾಷೆಯನ್ನು ಯಾವ ಶೈಲಿಯನ್ನು ತನ್ನ ದೇಹಾಕೃತಿಯಲ್ಲಿ ಧರಿಸಿದೆ ಎಂಬುದನ್ನು ಚರ್ಚಿಸುವೆ.

# ಅಧ್ಯಾಯ - ೨

# ಅನ್ಯ ಮತ್ತು ದೇಸಿ ಸಂಸ್ಕೃತಿಯ ಮುಖಾಮುಖಿ ಮತ್ತು ಅನುಸಂಧಾನ

ಯಾವೊಂದು ಸಮಾಜವು ತನ್ನದೇ ಆದ ದೇಸಿ ಸಂಸ್ಕೃತಿಯನ್ನು ಒಳಗೊಂಡಿರುತ್ತದೆ. ನಂಬಿಕೆಗಳು, ಆಚರಣೆಗಳು ಮತ್ತು ಮೌಲ್ಯಗಳನ್ನು ಆಯಾ ಪರಿಸರಕ್ಕೆ ತಕ್ಕಂತೆ ವಿಭಿನ್ನ ತೆರೆಯಲ್ಲಿ ಭೌತಿಕ ಮತ್ತು ಅಭೌತಿಕ ಸಂಸ್ಕೃತಿಯನ್ನು ಒಳಗೊಂಡಂತೆ ತಮ್ಮ ಬದುಕಿನ ಜೀವನ ಶೈಲಿಯನ್ನು ರೂಪಿಸಿಕೊಂಡಿರುತ್ತವೆ. ದೇಸಿಯ ಸಂಸ್ಕೃತಿಯ ಬೇರುಗಳು ದೇಸಿಗನೊಬ್ಬನಿಗೆ ತನ್ನತನದಿಂದಲೇ ಗೋಚರವಾಗುವುದು ಅಸ್ಪಷ್ಟವಾಗುತ್ತದೆ. ಇದಕ್ಕೆ ಕಾರಣ ಅವನ ಅಂತಃಕರಣದ ಚಕ್ಷುಗಳು ಅದೇ ದೇಸಿಯ ಮಣ್ಣಿನಿಂದ ಕೂಡಿರುವುದು.

ಯಾವೊಂದು ಸಂಸ್ಕೃತಿಯಲ್ಲಿ ಗಟ್ಟಿತನವು ಉಳಿಯಬೇಕಾದರೆ ತನ್ನತನವನ್ನು ಉಳಿಸಿಕೊಳ್ಳಬೇಕಾದರೆ ಭದ್ರತೆಯನ್ನು ಕಾಪಾಡಿಕೊಳ್ಳಬೇಕಾದರೆ ದೌರ್ಬಲ್ಯಗಳನ್ನು ಹಿಮ್ಮೆಟ್ಟಿಸಬೇಕಾಗುತ್ತದೆ. ಡಿ.ಆರ್. ನಾಗರಾಜರವರು ಹೇಳುವಂತೆ '' ದೇಸಿಯ ಸಂಸ್ಕೃತಿಯೊಳಗೆ ಬಾಹ್ಯ ಮತ್ತು ಆಂತರಿಕ ಸಂಘರ್ಷಗಳಿರುತ್ತವೆ''. ಇಂತಹದೊಂದು ಸಂಘರ್ಷ ಸಿಡಿಲಿನಂತೆ ಆಗಾಗ್ಗೆ ಗೋಚರಿಸುತ್ತಿರುತ್ತದೆ.

ಶಾರೀರಿಕ ಶಿಸ್ತಿಗಿಂತಲೂ ಬೌದ್ಧಿಕ ಶಿಸ್ತಿನ ಆಯಾಮಗಳು ತಮ್ಮದೇ ಆದ ವಿನ್ಯಾಸಗಳಲ್ಲಿ ಅನಾವರಣಗೊಂಡಿರುತ್ತವೆ. ಈ ಅನಾವರಣದಲ್ಲಿ ದೇಸೀ ಸಂಸ್ಕೃತಿ ಛಾಯೆಗಳು, ಎಳೆಗಳು ಹುದುಗಿರುತ್ತವೆ. ಯಾವೊಂದು ಸಮಾಜವು ಬದಲಾಗಬೇಕಾದರೆ ಪುನರ್‌ಸೃಷ್ಟಿಸಿಕೊಳ್ಳಬೇಕಾದರೆ ಆಂತರಿಕ ಸಂಘರ್ಷವು ಮುಖ್ಯಕಾರಣವಾಗಿರುತ್ತದೆ.

ಒಂದು ಸಂಸ್ಕೃತಿಯು ಇನ್ನೊಂದು ಸಂಸ್ಕೃತಿಗಿಂತ ನಮಗೆ ಭಿನ್ನವಾಗಿದೆ ಎಂದು ಯಾವಾಗ ಗೋಚರಿಸುವುದೆಂದರೆ ಬೇರೊಂದು ಸಂಸ್ಕೃತಿಯು 'ದೇಸಿಯತೆ' ಎನ್ನುವ ಸಂಸ್ಕೃತಿಯ ಮೇಲೆ ಆಕ್ರಮಣ ಮಾಡಿದಾಗ ಇಂತಹದೊಂದು ಆಕ್ರಮಣವೇ ಯಜಮಾನಿಕೆಯ ಸ್ಥಿತಿಯಲ್ಲಿ ಆಳ್ವಿಕೆಯನ್ನು ಮಾಡುವ ಅಧಿಕಾರ ದರ್ಪದಿಂದ ಮೆರೆಯುವ ಸಾಹಸವನ್ನು ಮಾಡುತ್ತಿರುತ್ತದೆ.

ಅನ್ಯ ಸಂಸ್ಕೃತಿಯು ಏಕಮುಖವಾಗಿರದೆ ಬಹುಮುಖತೆಯನ್ನು ಹೊಂದಿದ್ದು ತನ್ನದೇ ಆದ ಆಳ ವಿಸ್ತಾರವನ್ನು ಒಳಗೊಂಡಿರುತ್ತದೆ. ಹಾಗೆಂದು ದೇಸಿಯ ಸಂಸ್ಕೃತಿಯು ಏಕಮುಖವಾಗಿರುತ್ತದೆಂದು ಅದರರ್ಥವಲ್ಲ. ಅದೂ ಸಹ ಬಹುಮುಖತೆಯನ್ನು ಹೊಂದಿರುತ್ತದೆ.

ಅನ್ಯ ಸಂಸ್ಕೃತಿ ಎಂದರೆ ಕೇವಲ ವಸಾಹತುಶಾಹಿ ಸಂಸ್ಕೃತಿಯೊಂದೇ ಅರ್ಥವಲ್ಲ. ಅದು ಗ್ರೀಕ್‌ಸಂಸ್ಕೃತಿ, ಸಿಥಿಯನ್ನರಸಂಸ್ಕೃತಿ, ಹೂಣರ ಸಂಸ್ಕೃತಿ ಮತ್ತು ಮುಸ್ಲಿಂ ಸಂಸ್ಕೃತಿ ಇತ್ಯಾದಿಯಾಗಿರಬಹುದು. ದೇಸಿಯ ಸಂಸ್ಕೃತಿಯ ಪರಿಕಲ್ಪನೆ ಮೂಡುವುದು ಈ ಅನ್ಯ ಸಂಸ್ಕೃತಿಯು ಮುಖಾಮುಖಿಯಾದಾಗ, ದೇಸಿ ಸಂಸ್ಕೃತಿಯ ಏಳು ಬೀಳುಗಳು, ಅದರ ಸ್ಥಿತಿಗತಿಗಳು ಭದ್ರಬುನಾದಿಗಳು ನಮಗೆ ಗೋಚರಿಸುತ್ತವೆ.

ದೇಸಿಯ ಸಂಸ್ಕೃತಿಯು ಬಹುವಿನ್ಯಾಸದಿಂದ ಕೂಡಿದ್ದು ವೃತ್ತಾಕಾರದ ಚಲನೆಯನ್ನು ಹೊಂದಿರುತ್ತದೆ ದೇಸಿಯ ಸಂಸ್ಕೃತಿಯ ನಿಜವಾದ ಕ್ರಿಯಾಶೀಲತೆ ಇರುವುದು ಇಲ್ಲಿಯೇ ಅನ್ಯ ಸಂಸ್ಕೃತಿಯ ಯಜಮಾನಿಕೆಯ ಮುಖವಾಡದ ತಂತ್ರಗಳನ್ನು ಗ್ರಹಿಸಿ ತನಗೆ ಯಾವುದು ಮುಖ್ಯವೋ ಅದನ್ನು ಮಾತ್ರವೇ ಸ್ವೀಕರಿಸಲು ಕಾರಣ ''ವೃತ್ತಾಕಾರದ ಚಲನೆಯೆ'.

ಅನ್ಯಸಂಸ್ಕೃತಿಯ ಆಕ್ರಮಣಕ್ಕೊಳಗಾಗಿರುವ ಯಾವೊಂದು ಅಧೀನ ಸಂಸ್ಕೃತಿಯನ್ನು ತನ್ನಂತೆ ಮಾರ್ಪಡಿಸಿಕೊಳ್ಳುವ ತನ್ನ ಅಧೀನಕ್ಕೆ ಒಳಪಡಿಸಿಕೊಳ್ಳುವ, ತನ್ನಂತೆ ಒಗ್ಗಿಸಿಕೊಳ್ಳುವ, ತನಗೆ ಒಗ್ಗದಿದ್ದರೆ ತಂತ್ರಗಳನ್ನು ಬಳಸುವ 'ಡ್ರಾಕುಲದಂತೆ' ಹೊಂಚು ಹಾಕುವ ಕ್ರಿಯೆಯನ್ನು ಯಾವಾಗಲೂ ಮಾಡುತ್ತಿರುತ್ತದೆ.

ಹೀಗಾಗಿಯೇ ಭಾರತದಂತಹ ದೇಸಿಯ ಸಂಸ್ಕೃತಿಯ ಮೇಲೆ ಅನ್ಯ ಸಂಸ್ಕೃತಿಗಳ ಆಕ್ರಮಣವಾದರೂ ತನ್ನ ದೇಸಿತನದ ಗಟ್ಟಿಬೇರನ್ನು ಇಂದಿಗೂ ಉಳಿಸಿಕೊಂಡಿದೆ.

ನಮ್ಮ ಬಹುಮುಖಿ ಸಂಸ್ಕೃತಿಯು ವ್ಯಕ್ತಪಡಿಸಿದ ಪ್ರಕ್ರಿಯೆಯು ವಸಾಹತುಶಾಹಿಯ ಹೊಸಮೌಲ್ಯಗಳಿಗೆ ಬಹುರೂಪಿಯಾಗಿತ್ತು. ಕೆಲವು ಬದಲಾವಣೆಗಳು ನಮ್ಮನ್ನು ತಲ್ಲಣಗೊಳಿಸಿದರೆ ಮತ್ತೆ ಕೆಲವು ಒಂದು ಬಗೆಯ ವಿಮೋಚನೆಯ ಭಾವವನ್ನುಂಟು ಮಾಡಿದವು. ಕೆಲವನ್ನು ವಿರೋಧಿಸಿದರೆ ಮತ್ತೆ ಕೆಲವೊಂದಿಗೆ ರಾಜಿಮಾಡಿಕೊಳ್ಳಲಾಯಿತು. ಕೆಲವನ್ನು ಸ್ವಾಗತಿಸಿದರೆ ಮತ್ತೆ ಕೆಲವನ್ನು ಉಗ್ರವಾಗಿ ಪ್ರತಿಭಟಿಸಲಾಯಿತು. ಈ ಸ್ವಾಗತ-ರಾಜಿ- ಸಂಘರ್ಷಗಳ ಡಯಲೆಕ್ಟಿಕ್‌ನಲ್ಲೇ ನಮ್ಮ ಲೇಖಕರು ಐತಿಹಾಸಿಕ ವಾಸ್ತವತೆಯನ್ನು ಗ್ರಹಿಸಬೇಕಾಯಿತು.

ದೇಸಿಯ ಸಂಸ್ಕೃತಿ ಮತ್ತು ಪರಕೀಯ ಸಂಸ್ಕೃತಿಗಳ ಮುಖಾಮುಖಿಯ ಸ್ವರೂಪ ಈ ಐತಿಹಾಸಿಕ ವಾಸ್ತವತೆಯ ಒಂದು ಮುಖವಾಗಿದ್ದರೆ ಇನ್ನೊಂದು ನಿಟ್ಟಿನಲ್ಲಿ ನಮ್ಮ ಸಮಾಜದ ಒಳಗೂ ಚಲನೆ ಪ್ರಾರಂಭವಾಯಿತು. ಈ ಕ್ರಿಯೆಯಿಂದಲೇ ಸುಧಾರಣವಾದಿ ಚಳುವಳಿಗಳು ಹುಟ್ಟಿಕೊಂಡವು. ತನ್ನ ಒಳಗಿನ ಅನೇಕ ಹುಳುಕುಗಳನ್ನು ಮನಗಂಡ ಸಮಾಜ ತನ್ನನ್ನು ತಾನೇ ತಿದ್ದಿಕೊಳ್ಳುವ, ಪರಿಷ್ಕರಿಸಿಕೊಳ್ಳುವ ಕ್ರಿಯೆಯಲ್ಲೂ ಮುಂದಾಯಿತು.

ವಾಸ್ತವತಾವಾದಿ ಕಾದಂಬರಿಗಾರ ಈ ಗೊಂದಲಗಳನ್ನು ಸಮಗ್ರವಾಗಿ ಗ್ರಹಿಸಬೇಕಾಯಿತು. ರಾಜಾರಾಮ್ ಮೋಹನ್‌ರಾಯರ 'ಸುಧಾರಣಪರ ಚಳುವಳಿ', ಗಾಂಧೀಜಿಯವರ - 'ಸಾಮಾಜಿಕ ರಾಜಕೀಯ ಚಳುವಳಿ' ಅಂಬೇಡ್ಕರರ 'ದಲಿತ ಚಳುವಳಿ' ಇವೆಲ್ಲವುಗಳಿಗೆ ವಾಸ್ತವತಾವಾದಿ ಕಾದಂಬರಿಗಾರ ಏಕಕಾಲದಲ್ಲಿ ಸ್ಪಂದಿಸಬೇಕಾಯಿತು. ಸುಧಾರಣಾವಾದಿ ಚಳುವಳಿಗಳ ಪ್ರಭಾವದಿಂದಲೇ ಧಾರ್ಮಿಕ ಮೂಢನಂಬಿಕೆಗಳ ಖಂಡನೆ, ಸಾಂಸ್ಥಿಕ ಭ್ರಷ್ಟಚಾರಗಳ ಟೀಕೆ, ಉದಾರವಾದಿ, ಮಾನವತಾವಾದಿ ಮೌಲ್ಯಗಳ ಭಾವುಕ ಪುರಸ್ಕಾರ ಎದ್ದು ಬದ್ದಂತೆ ಕಾಣುತ್ತವೆ.

ಧಾರ್ಮಿಕ ಅತಿರೇಕಗಳನ್ನು ಖಂಡಿಸುವುದರ ಮೂಲಕ ನಮ್ಮ ಸಂಸ್ಕೃತಿಯನ್ನು ಪುನರ್ ಉದ್ಧರಿಸಬೇಕೆಂಬ ನವಭಾರತೀಯತೆಯು ಇಂಗ್ಲೀಷ್ ಶಿಕ್ಷಣದ ಮೋಹವನ್ನು ತನ್ನ ಜೊತೆಯಲ್ಲಿಟ್ಟುಕೊಂಡು ಹೊರಡುವಂತಹದನ್ನು ಗಮನಿಸಬೇಕು.

ನಮಗೆ ಆಧುನಿಕತೆ ಬಂದದ್ದು ಅನಿವಾರ್ಯತೆಯಿಂದಲ್ಲ. ಆದರೂ ನಮ್ಮ ವಾಸ್ತವತಾವಾದಿ ಪ್ರೇರಣೆಗಳಿಗೆ ಅದು ಎಡೆಮಾಡಿಕೊಟ್ಟಿತು. ತಂತ್ರಗಾರಿಕೆ ಸುಧಾರಣೆ ಮತ್ತು ಆಕ್ರಮಣಗಳ ಮೂಲಕ ಪ್ರವೇಶವಾಗಿ ನಮ್ಮ ಪರಂಪರಾಗತ ಮೌಲ್ಯಗಳ ಮೇಲೆ ಉಂಟುಮಾಡಿದ ಆಘಾತದ ಸ್ವರೂಪ ಕೂಡ ಸಂಕೀರ್ಣವಾಗಿದೆ.

ಇತಿಹಾಸದುದ್ದಕ್ಕೂ ಅನ್ಯ ಆಕ್ರಮಣಕ್ಕೆ ತುತ್ತಾಗುತ್ತಲೇ ಬಂದಿರುವ ಭಾರತೀಯ ಸಮಾಜ ಹಿಂದೆಂದೂ ಈ ಬಗೆಯ ಆಘಾತವನ್ನು ಎದುರಿಸಿರಲಿಲ್ಲ. ಇತರ ಸಂಸ್ಕೃತಿಗಳು ಹಿಂದೂ ಸಂಸ್ಕೃತಿಯೊಡನೆ ಒಂದು ಬಗೆಯ ಸಮಾನ ದೂರವನ್ನು ಉಳಿಸಿಕೊಂಡೆ ಬಂದಿದ್ದವು. ಕೆಲವು ಸಂದರ್ಭಗಳಲ್ಲಿ ದೇಸಿಯ ಸಂಸ್ಕೃತಿಗಳು ಅನ್ಯ ಸಂಸ್ಕೃತಿಯ ಪರಸ್ಪರ ಪ್ರಭಾವಕ್ಕೊಳಗಾಗಿದ್ದರೂ ಅದು ಒಂದು ಸಮಾಜದ ವ್ಯವಸ್ಥೆಯನ್ನೇ ಅಲುಗಾಡಿಸುವಷ್ಟು ಪ್ರಬಲವಾಗಿರಲಿಲ್ಲ. ಅರ್ಥಪೂರ್ಣ ಸಂಘರ್ಷ ಎದುರಾಗಿರಲಿಲ್ಲ.

ಆದರೆ ವಸಾಹತುಶಾಹಿ ಆಡಳಿತದ ಹಿಂದೆ ಕೈಗಾರಿಕಾ ಕ್ರಾಂತಿ ಇತ್ತು. ಹೊಸ ವೈಜ್ಞಾನಿಕ ಸಂಸ್ಕೃತಿ ಇತ್ತು. ಹೀಗಾಗಿ ಭಾರತೀಯ ಸಮಾಜ ಮೊಟ್ಟಮೊದಲ ಬಾರಿಗೆ ಹೊಸದೊಂದು ವಾಸ್ತವಕ್ಕೆ ಅನಿವಾರ್ಯವಾಗಿ ತೆರೆದುಕೊಳ್ಳಬೇಕಾಯಿತು. ಆಫ್ರಿಕಾದಲ್ಲಾದದ್ದೂ ಅದೇ.

ನಮ್ಮ ಮೊದಲಿನ ಕನ್ನಡದ ಕಾದಂಬರಿಕಾರರಿಗೆ ಈ ಹೊಸ ಐತಿಹಾಸಿಕ ವಾಸ್ತವತೆಯ ಮೇಲ್ಪದರಗಳು ಮಾತ್ರ ಕಂಡಿದ್ದವು. ಹೀಗಾಗಿ ಭಾವುಕ ಆದರ್ಶಗಳಲ್ಲಿ ಮುಳುಗಿದ್ದ ಅವರಿಗೆ ಆಧುನಿಕತೆಯ ಪರಿಣಾಮದ ಮೂಲಚಿತ್ರ ಕಂಡಿರಲಿಲ್ಲ. ಕನ್ನಡದ ಅತ್ಯಂತ ಮಹತ್ವದ ಕಾದಂಬರಿಕಾರರಾದ ಕುವೆಂಪು ಕೃತಿಗಳಲ್ಲೂ ಸಹ ಈ ತಲ್ಲಣಗಳು ಕಂಡುಬರುತ್ತವೆ.

''ಪರಂಪರಾಗತವಾದ ಸಾಮಾಜಿಕ ವ್ಯವಸ್ಥೆಯು ಆಧುನಿಕ ಮೌಲ್ಯಗಳಿಗೆ ಮುಖಾಮುಖಿಯಾದಾಗ ಪಲ್ಲಟಗೊಳ್ಳುವ ಕ್ರಮ ಶಿವರಾಮಕಾರಂತರ ಕಾದಂಬರಿಗಳಲ್ಲಿ ಮುಖ್ಯವಾಗಿ ಗೋಚರಿಸುತ್ತವೆ. ವಾಸ್ತವತಾವಾದಿ ಪರಂಪರೆಯೊಂದು ನಿಧಾನವಾಗಿ ಕಣ್ತೆರೆಯುತ್ತಿದ್ದ ಆಧುನಿಕ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಕಾರಂತರು ತಮ್ಮ ಕಾದಂಬರಿಗಳನ್ನು ಬರೆಯಲಾರಂಭಿಸಿದರು.'' [೧] (ಪು. ೮೨)

ಕಾರಂತರು ದಕ್ಷಿಣಕನ್ನಡ ಜಿಲ್ಲೆಯ ಭೌಗೋಳಿಕ ಪರಿಸರದವರಾಗಿದ್ದರಿಂದ ಅಲ್ಲಿನ ಕಡಲು, ಕಾನನ, ಜೊಯ್ಯನೆ ಸುರಿಯುವ ಮಳೆ ಮತ್ತು ಅಲ್ಲಿನ ಜನಜೀವನ ಸಂಸ್ಕೃತಿ, ಪರಿಸರ ಸಂಸ್ಕೃತಿಯನ್ನು ಅನುಭವಿಸಿ ತಮ್ಮದೇ ಆದ ಪ್ರಾದೇಶಿಕ ಕಾದಂಬರಿಗಳನ್ನು ಬರೆದು ಅಖಿಲಕರ್ನಾಟಕ, ಅಖಿಲಭಾರತ ಅಷ್ಟೇ ಏಕೆ ಒಟ್ಟು ತೃತೀಯ ಜಗತ್ತಿನ ಸಾಮಾಜಿಕ ಸ್ಥಿತ್ಯಂತರದ ಕೆಲವು ಮೂಲ ಮಾದರಿಗಳನ್ನು ಸೂಕ್ಷ್ಮವಾಗಿ ಹೊಳೆಯಿಸುತ್ತದೆ.

ಕುವೆಂಪುರವರು ಮಲೆನಾಡಿನವರಾಗಿದ್ದರಿಂದ ಅಲ್ಲಿನ ಪ್ರಕೃತಿ ಸಂಸ್ಕೃತಿ, ಪರಿಸರ ಸಂಸ್ಕೃತಿ, ಕಾನನ, ಕಾಜಾಣದಂತಹ ಪಕ್ಷಿಗಳ, ಪ್ರಾಣಿಗಳ ವೈಭವಯೋತ ಚೈತನ್ಯದ ಹಿರಿಮೆ ಅವರ ಕಾದಂಬರಿಗಳಲ್ಲಿ ಚಿತ್ರಿಸಲಾಗಿದೆ. ಮಹತ್ವದ ಸಾಂಸ್ಕೃತಿಕ ಚರಿತ್ರೆಗಳನ್ನೂ ಸಹ ಚಿತ್ರಿಸುತ್ತವೆ. ರಾವ್‌ಬಹುದ್ದೂರರ 'ಗ್ರಾಮಾಯಣ' ಕಾದಂಬರಿಯಲ್ಲಿ ಪ್ರಕೃತಿ ವರ್ಣನೆಗಿಂತ ಮಾನವ ಬದುಕಿನ ಕೃತಕತೆಯು ಚಿತ್ರಿತವಾಗಿದೆ. ಇಲ್ಲಿ ಪ್ರಕೃತಿಗಿಂತ ಮಾನವ ಜೀವನದ ಪರಿಸರ ಮುಖ್ಯವಾಗಿದೆ. ಸರಂಜಾಮು ಪದ್ಧತಿ, ಜಾತಿಪದ್ಧತಿಗಳು ಬಲವಾಗಿ

ಬೇರೂರಿದ್ದ ಕಳೆದ ಶತಮಾನದ ಕೊನೆಯ ಭಾಗದ ಜೀವನವನ್ನು ಚಿತ್ರಿಸ ತೊಡಗುತ್ತದೆ. ಆದರೂ ಪಾಶ್ಚಾತ್ಯರ ಪ್ರಭಾವ ಅಥವಾ ಅನ್ಯರ ಪ್ರಭಾವ ನಿಧಾನವಾಗಿ ನಗರಗಳಿಂದ ಹಳ್ಳಿಗಳಿಂದ ಹಳ್ಳಿಗಳಾಗಿ ಹರಿಯಲಾರಂಭಿಸಿ ಹೇಗೆ ಹಿಂದಿನ ಮೌಲ್ಯವ್ಯವಸ್ಥೆ ಕುಸಿಯ ಲಾರಂಭಿಸಿತೆಂಬುದನ್ನು ನಾವು ಕಾಣಬಹುದು.

'ಮರಳಿ ಮಣ್ಣಿಗೆ' ಕಾದಂಬರಿಯ ವಿಕಾಸದ ಕ್ರಮದಲ್ಲಿ ಮೂರು ಅವಸ್ಥೆಗಳನ್ನು ನಾವು ಗುರುತಿಸಬಹುದು. ಪ್ರಥಮ ಅವಸ್ಥೆಯು 'ಮಣ್ಣಿಗೂ-ಗ್ರಾಮೀಣಕ್ಕೂ' ಮೂಲಭೂತ ಸಂಬಂಧವಿರುವ ಗ್ರಾಮೀಣ ಸಂಸ್ಕೃತಿ ಅಂದರೆ ದೇಸಿಯ ಸಂಸ್ಕೃತಿ ಇದರೊಂದಿಗೆ ಪ್ರಕೃತಿ ಸಂಸ್ಕೃತಿಯು ಪರಸ್ಪರ ಅಂಟಿಕೊಂಡಿರುವುದರಿಂದಲೇ ಕಾದಂಬರಿಯು ರಾಮಐತಾಳ, ಪಾರೋತಿ ಇವರ ಮದುವೆಯ ದಿನದಲ್ಲಿ ಹಿಡಿದ ಮಳೆಗಾಳಿ ವರ್ಣನೆಯಿಂದಲೇ ಪ್ರಾರಂಭವಾಗುತ್ತದೆ.

''ಮಳೆಯಲ್ಲೇ ದಿಬ್ಬಣ ಹೊರಟಿತು. ಮಳೆಯಲ್ಲೇ ಹೆಣ್ಣಿನ ಮನೆಯ ಚಪ್ಪರವನ್ನು ಸೇರಿತು. ಅದರ ನಡುವೆ ಇರುವ ಒಂದೂವಣೆ ಹರದಾರಿ ದೂರವನ್ನು ಸಾಗಲು ಎರಡು ಜಾವ ಹಿಡಿಯಿತು. ಬೆಂಗೆರೆಯ ಮೇಲೆ ಕಡಲುಗಾಳಿಗೆ ಮುಖಒಡ್ಡಿ ನಡೆಯುವುದು ಸಣ್ಣ ಆಟವಲ್ಲ, ಉಟ್ಟವಸ್ತ್ರ ಎತ್ತಿಂದತ್ತೋ! ಹಿಡಿದ ಕೊಡೆಗಳು ನಾಲ್ಕು, ನಾಲ್ಕುಬಾರಿ ಕೈತಪ್ಪಿ ಎಲ್ಲಿಂದಲ್ಲಿಗೋ ಹೋದುವು. ಸ್ವತಃ ಐತಾಳರು ಹಿಡಿದ ಕಾಲುಕೊಡೆ, ಮದುವೆಯ ಮನೆಯನ್ನು ಏರುವಾಗ ತುಮುರು ಮಾತ್ರ ಉಳಿದಿತ್ತು. ಏನು ಮಳೆ! ಈ ಸಂಭ್ರಮದಲ್ಲಿ ಗೊರಬು ತೆಗೆದುಕೊಂಡವರ ಮುಖ, ಎದೆ ಕಾಲುಗಳು ಒದ್ದೆಯಾದರೂ ಬೆನ್ನು ಮಾತ್ರ ಬೆಚ್ಚಗೆ ಉಳಿದಿತ್ತು.'' [೨] (ಪು. ೨)

''ಮಳೆಯಲ್ಲಿ ಒಬ್ಬರನೊಬ್ಬರು ಕರೆದರೂ ಕೇಳಿಸುವ ಹಾಗಿಲ್ಲ, ನಾಲ್ಕು ಮೂರು ಒಬ್ಬರಿಂದೊಬ್ಬರು ದೂರ ಸರಿದರೂ ಕಾಣಿಸುವ ಹಾಗಿಲ್ಲ. ಚದರಿಹೋದ ಗಂಟಿಯ ಹಿಂಡನ್ನು ಹಿಡಿದೋಡಿಸಿ ಮನೆಗೆ ತಂದಂಥ ಕೆಲಸ ಆಯಿತು. ಆ ದಿನದ ದಿಬ್ಬಣ ಹಾಗೆಂದೆ - ಗಂಡಿನ ಕಡೆ ವಾದ್ಯದವರು ದಿಬ್ಬಣಕ್ಕೂ ಮೊದಲು ಓಡಿ ಓಡಿ ಬಂದು, ಹೆಣ್ಣಿನ ಮನೆಯ ಜಗುಲಿಯಲ್ಲಿ ಸೇರಿಕೊಂಡಿದ್ದರು. ದಿಬ್ಬಣಿಗರಲ್ಲಿ ಅರಿವೆ ಕೊಡೆ ಹಿಡಿಯುವ ಊರಿನ ಗುರಿಕಾರರು ಒಬ್ಬೊಬ್ಬರೂ ಬಂದಿರಲಿಲ್ಲ. ಮದುವೆಗೆ ಬಾರದವರು ಐತಾಳರಲ್ಲಿ ಆರತಿ ಅಕ್ಷತೆಯ ದಿನ ಹೋದರಾಯಿತು. ಅದೂ ಮಳೆ ಬಿಟ್ಟರೆ ಎಂದು ವಾಯಿದೆ ಮುಂದೆ ಹಾಕಿ ಕುಳಿತುಬಿಟ್ಟರು.'' [೩] (ಪು. ೨, ೩).

''ಮನೆ ಅಂಗಳವೇ ಮಳೆಯಿಂದ ಗದ್ದೆ ಆಗಿತ್ತು. ಚಪ್ಪರ ಹಾರಿ ಬರಿಯ ಅಂಗಳ ಉಳಿದಿತ್ತು''.

''ಲಗ್ನದ ನಾಲ್ಕು ದಿನಗಳೂ ಹೀಗೆಯೇ ನಡೆಯಿತು. ಹೆಣ್ಣಿನ ಮನೆಗೆ ಬಂದು ಹೋಗುವ ಸಡಗರವೆಲ್ಲ ಮಳೆಯಲ್ಲೇ ಆ ಮಳೆಯಲ್ಲೇ ಮದುವೆಗೆ ಬಂದ ಅರ್ಧದಷ್ಟು ಜನ ಕೊನೆಯ ದಿನ ಉಳಿಯಲಿಲ್ಲ.''

''ಕೋದಂಡ ಐತಾಳರ ಮಗನ ಮದುವೆ ಮಣೂರಿನಲ್ಲಿ ನಡೆಯುತ್ತಿರುವಾಗಲೇ ಅವರ ತೆಂಗಿನ ತೋಟದಿಂದ ಆರೆಂಟು ಮರಗಳು ಕಡಲಿಗೆ ತುತ್ತಾದವು. ಈ ಪಾಟಿ, ಕಡಲಿಗೆ ಹುಚ್ಚು ಹಿಡಿದುದನ್ನು ನನ್ನ ಅಜ್ಜನದಿಂದಲೂ ನಾ ಕಾಣೆ' ಎಂದು ಕೋದಂಡ ಐತಾಳರು ಹೇಳುತ್ತಿದ್ದರು.''.

''ವರ್ಷಕ್ಕೆ ಸುಮಾರು ಸಾವಿರ ತೆಂಗಿನ ಕಾಯಿಗಳನ್ನು ಕೊಡುವಷ್ಟು ಮರಗಳು ಆ ಒಂದೇ ದಿನ ಸಮುದ್ರರಾಯನಿಗೆ ಆಹುತಿಯಾದುವಂತೆ'' [೪] (ಪು.೩)

ಮೇಲಿನ ವರ್ಣನೆಯಲ್ಲಿ ಮಾನವ ಸಂಸ್ಕೃತಿ ಪ್ರಕೃತಿ ಸಂಸ್ಕೃತಿಗಳ ನಡುವೆ ಸಂಘರ್ಷವಿದೆ ಹೊಯ್ದಾಟವಿದೆ.

ಇದರೊಂದಿಗೆ 'ಕಾನೂರು ಹೆಗ್ಗಡಿತಿ' ಕಾದಂಬರಿಯಲ್ಲಿ ಬರುವ ಪ್ರಕೃತಿ ಸಂಸ್ಕೃತಿಯನ್ನು ನೋಡಿದಾಗ....

''ಬೇಸಗೆಯ ಮಧ್ಯಾಹ್ನದ ಸೂರ್ಯನ ತಪ್ತ ತಾಮ್ರಬಿಂಬವು ಕಠೋರ ನಿಷ್ಕಾರುಣ್ಯದಿಂದ ಕರೆಯುತ್ತಿದ್ದ ಪ್ರಖರ ಕಿರಣವರ್ಷದಲ್ಲಿ ದಟ್ಟವಾಗಿ ಕಾಡು ಬೆಳೆದು ತೆರೆತೆರೆಯಾಗಿ ಹಬ್ಬಿದ್ದ ಮಲೆನಾಡಿನ ಬೆಟ್ಟಗುಡ್ಡಗಳು ಆಯಾಸದಿಂದ ಮೂರ್ಛೆಗೊಂಡಂತೆ ಶ್ಯಾಮಲ ನಿದ್ರಾಸಕ್ತವಾಗಿದ್ದುವು. ಧೂಳುಗೊಂಪಿನ ರಸ್ತೆ ಸಹ್ಯಾದ್ರಿಯ ಅರಣ್ಯದೇವಿಯ ಮಹಾಮಸ್ತಕದ ಸುದೀರ್ಘವಾದ ಬೈತಲೆಯ ಸರಳ ವಕ್ರ ನಿಮ್ನೋನ್ನತ ರೇಖಾವಿನ್ಯಾಸದಂತೆ ಮೆರೆದಿತ್ತು. ರಸ್ತೆಯಲ್ಲಿ ಅಲ್ಲಲ್ಲಿ ತಂತಿಕಂಬಗಳಿದ್ದು ಬಾನಿಗೆದುರಾಗಿ ತಂತಿಯ ಕರಿಯ ಗೆರೆ ಕಂಬದಿಂದ ಕಂಬಕ್ಕೆ ಪ್ರವೇಶಿಸಿ ಓಡುವಂತಿತ್ತು. ಹೆದ್ದಾರಿಯ ಇಕ್ಕೆಲಗಳಲ್ಲಿಯೂ ಪ್ರಾರಂಭವಾಗಿ ಸ್ವಚ್ಛಂದ ಕಾನನ ಶ್ರೇಣಿ ದೃಷ್ಟಿ ದೂರದವರೆಗೂ ಪ್ರಸರಿಸುತ್ತಿತ್ತು. ಯಾವೊಂದು ಪ್ರಾಣಿಯ ಸಂಚಾರವೂ ಇರಲಿಲ್ಲ. ಆಗಾಗ ನೇರಿಲೆಯ

ಪೊದರು ಮರಗಳಲ್ಲಿ ಪಿಕಳಾರ ಹಕ್ಕಿಗಳು ಮಾತ್ರ ಚಿಮ್ಮುತ್ತಿದ್ದುದು ಕಾಣಬರುತ್ತಿತ್ತು.[೫]'' (ಪು. ೧೨)

ಮೇಲಿನ ಪ್ರಕೃತಿ ವರ್ಣನೆಯು ಚೈತನ್ಯೋದಾಯಕವಾಗಿದ್ದು, ಉಲ್ಲಾಸ ಹರ್ಷವನ್ನುಂಟು ಮಾಡಿ ಮಾನಸಿಕ ಕಲಾಪ್ರಪಂಚಕ್ಕೆ ಕರೆದೊಯ್ಯುತ್ತದೆ.

'ಗ್ರಾಮಾಯಣ' ಕಾದಂಬರಿಯಲ್ಲಿನ ಪ್ರಕೃತಿ ವರ್ಣನೆಯನ್ನು ನೋಡಿದಾಗ..... ''ಕಾರಹುಣ್ಣಿಮೆ ಎಂದಿನಂತೆ ಈ ವರ್ಷ ಮಳೆಗಾಲದ ನಾಂದಿಯನ್ನು ಹಾಡಲಿಲ್ಲ. ರೈತರಿಗೆ ಭಾಷೆ ಕೊಟ್ಟ ಉತ್ತರೆ-ಹಸ್ತಾ ಮಳೆಗಳೂ ಹೊತ್ತಿಗೆ ಕೈಕೊಟ್ಟವು. ಆಕಾಶದಲ್ಲಿ ಕವಿದುಬಂದ ಮೋಡಗಳು ಪಾದಳ್ಳಿಯ ರೈತರು ಹುಬ್ಬುಗೈ ಹಚ್ಚಿ ಮುಗಿಲು ನೋಡುತ್ತ ನಿಂತಿದ್ದನ್ನು ಲೆಕ್ಕಿಸದೆ ದಾಟಿಹೋದವು. ಭೂಮಿ ನಿರಾಶೆಯಿಂದ ಮಲಗಿತ್ತು ಬಾಳಚಾರ್ಯರ ಪಂಚಾಂಗ ಅವರಿಗೇ ಮೋಸ ಮಾಡಿತು. ಪಾದಳ್ಳಿಯಲ್ಲಿ ಮಳೆಯಾಗದಿದ್ದರೂ ದೂರದ ಮಲೆನಾಡಿನಲ್ಲಿ ಹೆಚ್ಚು ಮಳೆ ಬಿದ್ದಿರುವುದನ್ನು ಕೃಷ್ಣೆಗೆ ಬಂದ ಮಹಾಪೂರ ತೋರಿಸಿಕೊಟ್ಟು ಇಲ್ಲಿಯ ಜನರ ಆಸೆಯನ್ನು ಕೆಣಕಿತು. ನದಿ ಮುಳುಗಿದ ಭೂಮಿಗಳಲ್ಲಿ ಮಾತ್ರ ಬಿತ್ತಿಗೆಯಾಯಿತು. ದೀಪಾವಳಿಯಾದ ಮೇಲೆ ಚಿತ್ತ ಮಳೆಯ ಒಂದೆರಡು ನೆಳಕುಗಳು ಬಿದ್ದಿದ್ದರಿಂದ ನದಿ ಮುಳುಗಿದ ಹೊಲಗಳಲ್ಲಿಯ ಬೆಳೆ ಕೈಗೆ ಬ ರುವಂತಾಯಿತು. ಆದರೇನು ಉಳಿದ ಹೊಲಗಳೆಲ್ಲ ಬರಿದೋ ಬರಿದು. ಬರಗಾಲದ ಕರಿನೆರಳುಗಳು ಪಾದಳ್ಳಿಯ ಕರಿನೆಲದ ಮೇಲೆ ತುಂಬಾ ವ್ಯಾಪಿಸಿದವು.''[೬](ಪು. ೧೭ , ೧೮))

ಮೇಲಿನ ವರ್ಣನೆಯು 'ಮಳೆಯನ್ನು' ನಂಬಿ ನಿರಾಸೆಗೊಳ್ಳುವ ಬರಗಾಲದ ಮುನ್ಸೂಚನೆಯನ್ನು ಕಾಣಿಸುತ್ತದೆ. ಜ್ಯೋತಿಷ್ಯದ ಪಂಜಾಂಗವೇ ಮೋಸಮಾಡಿದೆ.

'ಮರಳಿ ಮಣ್ಣಿಗೆ' ಕಾದಂಬರಿಯ ವಸ್ತುವಿನ ವಿಕಾಸ ಕ್ರಮದಲ್ಲಿ 'ಗ್ರಾಮೀಣತೆ-ಮಣ್ಣು' ದೇಸೀಯತೆಯೊಂದಿಗೆ ಶಾಶ್ವತ ಮೌಲ್ಯಗಳನ್ನು ನಂಬಿದ ಸಮಾಜವನ್ನು ಪರಂಪರೆ - ಸಂಪ್ರದಾಯವನ್ನು ಹೊಂದಿದೆ. ಇಲ್ಲಿ ಬಾಳುವ ವ್ಯಕ್ತಿಗಳು ಸರಸೋತಿ, ರಾಮೈತಾಳ , ಪಾರೋತಿ, ಸತ್ಯಭಾಮೆ, ಶೀನ, ನಾರಾಯಣಯ್ಯ ಇತ್ಯಾದಿ - ತಮ್ಮ ಆವರಣದೊಂದಿಗೆ ಹೊಂದಿರುವ ಸಂಸ್ಕೃತಿಯಲ್ಲಿನ ಧನ್ಯತೆಯನ್ನು ಕಂಡುಕೊಳ್ಳುತ್ತಾರೆ. ಆದರೆ ಹೊಂದಾಣಿಕೆ ರೀತಿಯಲ್ಲಿ ವ್ಯಕ್ತಿಯಿಂದ ವ್ಯಕ್ತಿಗೆ ತಾರತಮ್ಯವಿದೆಯಾದರೂ ಪ್ರಬಲವಾದ ಅನ್ಯಸಂಸ್ಕೃತಿಯ ಹೋರಾಟ ನಡೆಯುವುದಿಲ್ಲ. 'ವರುಣ ದೇವರ ಮುಂದೆ ಮನುಷ್ಯರ ಆಟವೇ !' ಎಂದು

ಪ್ರಕೃತಿಯ ಸ್ವಾಮಿತ್ವವನ್ನು ಒಪ್ಪಿಕೊಳ್ಳುವ ಅದರೊಂದಿಗೆ ಸೆಣಸಾಡುವ ತಮ್ಮ ಬದುಕನ್ನು ಹಸನಾಗಿಸುವ ಪರಿಯನ್ನು ಕಾಣಬಹುದು.

ಸಮಾಜದಲ್ಲಿ ಪರಂಪರಾಗತವಾಗಿ ಹುದುಗಿರುವ ರೂಢವಾದ ಮೌಲ್ಯಗಳೇ ಅವರ ಅಸ್ತಿತ್ವದ ಸಾಂಸ್ಕೃತಿಕ ಶಾಶ್ವತದ ಮೌಲ್ಯಗಳಾಗಿವೆ. ಎಡರುತೊಡರುಗಳುಂಟಾದಾಗ ಬದುಕನ್ನು ಹಂಗಿಸುವ ಸಮಸ್ಯೆಗಳು ಎದುರಾದಾಗ ಸೋಲನ್ನುಂಡು ದುಃಖನನುಭವಿಸಿ ಅವರ ಸಾಂಸ್ಕೃತಿಕ ಪರಿಸರದಲ್ಲೇ ಪರಿಹಾರಗಳನ್ನು ಹುಡುಕಿಕೊಳ್ಳುತ್ತಾರೆ.

'ಕಾನೂರು ಹೆಗ್ಗಡಿತಿ'ಯಲ್ಲಿ ಪ್ರಕೃತಿಗೆ ತೀರ ನಿಕಟವಾಗಿ ಬದುಕುತ್ತಿರುವ ಮನುಷ್ಯ ಸಮೂಹವಿದೆ. ಇಲ್ಲಿಯೂ ಸಹ 'ಮರಳಿ ಮಣ್ಣಿಗೆ' ಯಲ್ಲಿದ್ದಂತೆ ಒಂದು ದೃಷ್ಟಿಯಿಂದ ಸಂಘರ್ಷಕ್ಕೆ ಅವಕಾಶಗಳೇ ಇಲ್ಲವೇನೋ ಎಂಬಂತೆ ಕಾಣುತ್ತದೆ. ಇಲ್ಲಿನ ಉತ್ಪಾದನಾ ವ್ಯವಸ್ಥೆಯ ಸ್ವರೂಪದಲ್ಲಿ -ವಸಾಹತುಶಾಹಿಆಳ್ವಿಕೆಯ ಹಿನ್ನೆಲೆಯಲ್ಲೂ - ಯಾವ ಬದಲಾವಣೆಯು ಗೋಚರಿಸುವುದಿಲ್ಲ ಇಲ್ಲಿನ ಜನಗಳು ವಾಸ್ತವಾದಿಗಳಿಗಿಂತ ಭಾವ ನಾತ್ಮಕಜೀವಿಗಳೆಂದರೆ ತಪ್ಪಾಗಲಾರದು.

ಹೀಗಾಗಿಯೇ ತಮ್ಮ ಸಮಸ್ಯೆಗಳನ್ನು ದೆವ್ವಭೂತಗಳು, ಹರಕೆಗಳು, ಪುರೋಹಿತಶಾಹಿ ಮತ್ತು ಅಧಿಕಾರಶಾಹಿಗಳನ್ನು ಶಾಂತಪಡಿಸುವ ಮೂಲಕವೇ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲು ಪ್ರಯತ್ನಿಸುತ್ತವೆ.

'ಗ್ರಾಮಾಯಣ'ದಲ್ಲಿ ಸರಂಜಾಮಿ ಪದ್ಧತಿ ಮತ್ತು ಜಾತಿ ಪದ್ಧತಿಗದಳಿರುವುದರಿಂದ 'ಪಾದಳ್ಳಿಯೇ' ಮುಖ್ಯ ಕೇಂದ್ರವಾಗಿರುವುದರಿಂದ ಇಲ್ಲಿಯೂ ಯಾವುದೇ ಬದಲಾವಣೆಯು ಕಾಣದೆ ಬದುಕಿನ ಸಂಸ್ಕೃತಿ ಚಿತ್ರಿತವಾಗಿದೆ, ನೈತಿಕತೆಗಿಂತ - ಅನೈತಿಕತೆ ತಾಂಡವಾಡುವಂತೆ ಚಿತ್ರಿತವಾಗಿದೆ.

'ಮರಳಿಮಣ್ಣಿಗೆ'ಯ ರಾಮ ಐತಾಳರಿಗೆ ಹಳೆಯ ತಲೆಮಾರಿನ ಎಲ್ಲಾ ಗುಣಾವಗುಣಗಳೂ ಇವೆ. ಆದುದರಿಂದಲೇ 'ಯಜಮಾನಿಕೆ' ಜವಾಬ್ದಾರಿಯನ್ನು ಹೊತ್ತು 'ಯಾರೊಬ್ಬರ ಪ್ರಶ್ನೆಗಳು ಏಳದಂತೆ' ನೋಡಿಕೊಳ್ಳುತ್ತಾರೆ. ಅದಕ್ಕಾಗಿಯೇ ಭತ್ತದ ಪಸಲಿನ ಮೊತ್ತದ ಬಗ್ಗೆ ಸುಳ್ಳು ಹೇಳಿದ್ದು ತಾವು ಸತ್ತ ಮೇಲೆ ಪಿಂಡ ಹಾಕಿ ಸಗ್ದತಿ ಕಾಣಿಸಲೆಂದು ಮೊದಲ ಹೆಂಡತಿ ಪಾರೋತಿ ಬದುಕಿರುವಾಗಲೇ ಮತ್ತೊಂದು ಮದುವೆಯನ್ನು ಆಗಲು ನಿಶ್ಚಯಿಸಿ, ಚಪ್ಪರಕ್ಕೆ ನೆಲ ಅಣಿಗೊಳಿಸಿ ಸಿದ್ಧಮಾಡಿದ ಮೇಲೆಯೇ ಹೇಳತೊಡಗುತ್ತಾರೆ.

''ಶೀನ, ನಮ್ಮ ಮನೆಯ ಪಂಚಾತಿಕೆ ನಿನಗೆ ಗೊತ್ತಿಲ್ಲ. ನಮ್ಮಲ್ಲಿ ಒಬ್ಬ ಯಜಮಾನ ಎಂದರೆ ಒಬ್ಬನೇ ಯಜಮಾನ. ಗಂಡನು ಒಂದು ಹೇಳುವುದು, ಹೆಂಡತಿ ಇನ್ನೊಂದು ಅಂಬುವುದೇ ಈವರೆಗೆ ನಡೆದಿದ್ದಿಲ್ಲ. ನಮ್ಮ ಪಡುಕೆರೆಯ ಪರಮನ ಮನೆಯವರ ಹಂಗೆ, ಗಂಡ-ಹೆಂಡಿರು ಹಗಲೆಲ್ಲ ಕಚ್ಚಾಡಿ, ಊರಿಗೆಲ್ಲ ಡಂಗುರ ಸಾರುವ ಪಂಚಾತಿಕೆ ನಮ್ಮಲ್ಲಿ ಇಲ್ಲವೇ ಇಲ್ಲ. ಆ ಒಂದು ವಿಷಯದಲ್ಲಿ ನಮ್ಮ ಪರೋತಿ ತಾಜಾಸೀತಾದೇವಿ. ನೋಡಿ, ಏನೋ ದೇವರು ಅವಳ ಹಣೆಯಲ್ಲಿ ಮೇಲೆ ಸಂತಾನದ ಯೋಗ ಬರೆಯಲಿಲ್ಲ ಎಂಬುದೊಂದೇ ಕೊರತೆ ಅಲ್ಲದೇ....ಅಲ್ಲವಾದರೆ ನನಗೇನು ಕಡಿಮೆಯಿದೆ ಹೇಳು! ನಾಳೆ ನೀನೇ ನೋಡುವಿ, ಆ ಹೆಣ್ಣು ಮನೆಗೆ ಬಂದ ಮೇಲೆ ಹೊಟ್ಟೆಯ ಮಗಳನ್ನು ಕಂಡ ಹಾಗೆ ಕಾಣುವುದನ್ನು'' ೭ (ಪು. ೫೮)

ಶೀನುಮಯ್ಯನು ಆಗಾಗ್ಗೆ ರಾಮ ಐತಾಳರ ಮನೆಗೆ ಬಂದು ತನ್ನ ಮೋಹ ಮಾತುಗಳಿಂದ ಬೆರಗುಗೊಳಿಸಿ ಸಾಲವಾಗಿ ದುಡ್ಡನ್ನು ಕಸಿದುಕೊಳ್ಳುತ್ತಾನೆ. ಇದೇ ಮುಂದೆ ರಾಮ ಐತಾಳ ಮತ್ತು ಶೀನುಮಯ್ಯನ ನಡುವೆ ಸಂಘರ್ಷಕ್ಕೆ ಚಿಗುರು ಒಡೆಯುತ್ತದೆ. ಕಾಲನಂತರದಲ್ಲಿ ಶೀನುಮಯ್ಯನು ರಾಮ ಐತಾಳರಿಗೆ ಬಡ್ಡಿ ಸಮೇತ ದುಡ್ಡನ್ನು ಹಿಂತಿರುಗಿಸುತ್ತಾರೆ. ಆದರೆ ಸಂಘರ್ಷದ ಬೇರುಗಳು ಆಂತರಿಕವಾಗಿ ಇಳೆ ಬಿಟ್ಟಿರುತ್ತವೆ.

ರಾಮ ಐತಾಳನು ವಿಧವೆ ತಂಗಿಯೊಂದಿಗೆ ತನ್ನ ಹೆಂಡತಿ ಪಾರೋತಿಯೊಂದಿಗೆ ಆಗಾಗ್ಗೆ ರೇಗುವುದು, ತಂಗಿಯಾದ ಸರಸೋತಿಯು ಅಣ್ಣನ ಮಾತಿಗೆ ಮರುಮಾತಿನಲ್ಲಿ ಥಡೀ ಏಟು ಕೊಡುವುದು, ಇದು ಆಗಾಗ್ಗೆ ವೈಯಕ್ತಿಕ ಸಂಘರ್ಷದಲ್ಲಿ ಮುಖಾಮುಖಿಯಾಗಿ ಗೋಚರಿಸುತ್ತದೆ.

ರಾಮ ಐತಾಳರು ಛತ್ರದ ಫಸಲಿನ ಬಗ್ಗೆ ಸುಳ್ಳು ಹೇಳುವುದು, ಪಾರೋತಿ ಬಂಜೆ ಎಂದು ನೊಂದು ದತ್ತು ಮಗುವನ್ನು ಪಡೆಯಲು ಹಂಬಲಿಸುವ ಆಲೋಚನೆಗಳು ಆಗಾಗ್ಗೆ ಕೌಟುಂಬಿಕ ಸಂಘರ್ಷಕ್ಕೆ ಎಡೆಮಾಡಿಕೊಡುತ್ತದೆ. ರಾಮ ಐತಾಳರು ತನ್ನ ಸಹೋದರಿ ಮತ್ತು ಹೆಂಡತಿಗೆ ಯಾವೊಂದು ಮಾತನ್ನುಹೇಳದೆ, ಪಡುಮುನ್ನೂರಿನ ಹುಡುಗಿ ಸತ್ಯಭಾಮೆಯನ್ನು ತಂಗಿ ಮತ್ತು ಹೆಂಡತಿಗೆ ಗೊತ್ತಾಗದಂತೆ ಗೊತ್ತು ಮಾಡಿಕೊಂಡು ಮನೆಯ ಅಂಗಳದಲ್ಲಿ ಚಪ್ಪರವನ್ನು ಹಾಕಿಸಿ ತನ್ನ ಯಜಮಾನಿಕೆಯನ್ನು ತೋರಿಸುವ ಮುಖಾಂತರವೇ ದಿಬ್ಬಣದ ಸುದ್ದಿಯನ್ನು ತಿಳಿಸುವುದು. ಹೆಂಡತಿಯಾದ ಪಾರೋತಿಗೆ ತನ್ನ ಸವತಿಯು ಹೇಗಿರುತ್ತಾಳೆಂಬ ಅಂಜಿಕೆಯೂ ಸಹ ಕಾಡುತ್ತಿರುತ್ತದೆ. ಈ ಮಾತು

ಸತ್ಯಭಾಮೆ ಮತ್ತು ಅವರ ಸಂಬಂಧಿಕರಿಗೂ ಅನ್ವಯಿಸುತ್ತದೆ. ಕಾಲಾನಂತರದಲ್ಲಿ ಸತ್ಯಭಾಮೆಗೆ ಲಕ್ಷ್ಮಿನಾರಾಯಣ (ಲಚ್ಚ) ಎಂಬ ಮಗು ಹುಟ್ಟಿದಾಗ ಸಂತೋಷವನ್ನು ಕಂಡರೂ ಮಗು ಬೆಳೆಯುತ್ತ ದೊಡ್ಡಮ್ಮ ಎಂದು ಪಾರೋತಿಯನ್ನು ಹೆಚ್ಚು ಆಶ್ರಯಿಸುತ್ತದೆ. ಹೀಗಾಗಿ ಸತ್ಯಭಾಮೆಗೆ ಪಾರೋತಿಯ ಮೇಲೆ ಮತ್ಸರ ಉಂಟಾಗಿ ರಾಮ ಐತಾಳರಿಗೆ ಚಾಡಿಹೇಳಿದ್ದು ಉಂಟು. ಇದರಿಂದ ಬಿರುಕು ನುಡಿಗಳು ಚಲ್ಲಿದ್ದು ಉಂಟು.

''ಶೀನುಮಯ್ಯನು ಮನೆಗೆ 'ಹೆಬ್ಬಾಗಿಲು' ಹಾಕಿಸಿದ್ದು ರಾಮ ಐತಾಳರಿಗೆ ಎಲ್ಲಿಲ್ಲದ ಮತ್ಸರ ಉಂಟಾಯಿತು. ಶೀನುಮಯ್ಯನ ಮಕ್ಕಳು ಬೆಂಗಳೂರಿನ ಹೋಟೆಲ್ ಉದ್ಯಮದಲ್ಲಿ ದುಡ್ಡುಗಳಿಸುವುದನ್ನು ಕಂಡು ರಾಮ ಐತಾಳರ ಮಾನವೀಯ ಅಂಶಗಳು ಹೊದ್ದೂಟಗಳಿಗೆ ಎಡೆಮಾಡಿಕೊಡುತ್ತದೆ. ಕೋಡಿಯಲ್ಲಿ ರಾಮಐತಾಳರ ತೆಂಗಿನ ತೋಟಕ್ಕೆ ಹೊಂದಿಕೊಂಡು ಐತು ಪೂಜಾರಿಯ ತೆಂಗಿನ ತೋಟವಿತ್ತು. ಆತನೊಮ್ಮೆ ಐದು ನೂರು ರೂಪಾಯಿ ಕ್ರಯಕ್ಕೆ ಅಡವಿಗೆ ರಾಮ ಐತಾಳರು ಕೇಳಿದ್ದುಂಟು. ರಾಮ ಐತಾಳರು ಅಂದು ಇನ್ನೂರು ರೂಪಾಯಿಗೆ ವಾಯಿದೆ ಮಾಡಿಕೊಳ್ಳುವ ಎಂದು ಯೋಚಿಸಿದರು. ಇದನ್ನು ಮನಗಂಡ ಶೀನಮಯ್ಯನು ''ನಿನಗೆ ಮರುಳೇ ನಾನು ೬೦೦ ಕ್ಕೂ ತಯಾರಿದ್ದೆ. ಹಣ ನಗದು ಸಿಗದೆ ಮಾತು ಬೆಳೆಯಿಸಬಾರದು ಎಂದು ಸುಮ್ಮನಿದ್ದೆ. ಇವತ್ತು ನೀನು ಕೊಟ್ಟಿದ್ದರೆ ಕಣ್ಮುಚ್ಚಿ ರೂಪಾಯಿ ೬೦೦ ಚೆಲ್ಲುತ್ತಿದ್ದೆ ಎಂದು ಪೂಜಾರಿಯ ಆಸೆಯನ್ನು ಹೆಚ್ಚಿಸಿ ಮನೆಗೆ ಕಳುಹಿಸಿದನು.''[೮] (ಪು. ೧೧೫)

ಶೀನುಮಯ್ಯ ತನ್ನ ಮಕ್ಕಳನ್ನು ಬೆಂಗಳೂರಿನ ಹೋಟೆಲಿಗೆ ಕಳುಹಿಸುವುದು ಪರೋಕ್ಷವಾಗಿ ಅನ್ಯ ಸಂಸ್ಕೃತಿಯ ಪ್ರಭಾವವನ್ನು ನಿಧಾನವಾಗಿ ಗೋಚರಿಸುತ್ತಿರುವುದನ್ನು ಕಾಣಬಹುದು. ಇದನ್ನು ಮನಗಂಡ ರಾಮಐತಾಳರು ತನ್ನ ಪೌರೋಹಿತ್ಯದ ಬಗ್ಗೆಪ್ರಶ್ನೆ ಮಾಡಿಕೊಳ್ಳುವ ಆರ್ಥಿಕ ಲಾಭದ ಪರಿಕಲ್ಪನೆಯನ್ನು ಇಟ್ಟುಕೊಂಡೆ ತನ್ನ ಮಗ ಲಚ್ಚನನ ವಿದ್ಯಾಭ್ಯಾಸದ ಬಗ್ಗೆ ಅಣ್ಣ ತಂಗಿಯ ನಡುವೆ ನಡೆಯುವ ಈ ಮಾತುಗಳು ಸ್ಪಷ್ಟ ಪಡಿಸುತ್ತವೆ.

''ಅಣ್ಣಾ ಈ ನವರಾತ್ರಿ ಪಾಡ್ಯಕ್ಕೆ ನಮ್ಮ ಶಂಕರ ಐಗಳ ಮಠಕ್ಕೆ ಲಚ್ಚನನ್ನು ಕಳುಹಿಸಬೇಕು. ಮಾಣಿಗೆ ಒಂದು 'ಶ್ರೀಗಣ' ಬಳ್ಳಿಯಾದರೂ ಬರಬೇಡವೇ? ಪಾರಂಪಳ್ಳಿ ವಾಸ್ತವ ಗುರಿಕಾರರ ಮಕ್ಕಳನ್ನು ಕುಂದಾಪುರಕ್ಕೋ, ಉಡುಪಿಗೋ-ಇಂಗ್ಲೀಸಿಗೆ ಕಳುಹಿಸುತ್ತಾರಂತೆ. ಲಚ್ಚನಿಗೆ ಇಂಗ್ಲೀಷು - ಪಂಗ್ಲೀಷು ಬೇಡ ಒಂದು ಭಾಗವತ, ರಾಮಾಯಣ ಓದಿ ಹೇಳುವುದಕ್ಕೆ ಬಂದರೆ ಸಾಕು ಎಂದಳು.''[೯] (ಪು. ೧೨೭)

ಕಾನೂರು ಹೆಗ್ಗಡತಿಯಲ್ಲಿ ಹೂವಯ್ಯ ರಾಮಯ್ಯನ ವಿದ್ಯಾಭ್ಯಾಸದ ಬಗ್ಗೆ ವೆಂಕಪಯ್ಯ ಚಂದ್ರೇಗೌಡನಿಗೆ ಹೇಳುವ ಮಾತನ್ನು ಗಮನಸಿಬಹುದು.

‘‘ನಾನು ಹೇಳಿದ್ದೆ ನಿನಗೆ ಮೊದಲೇ, ಈಗಿನ ವಿದ್ಯಾಭ್ಯಾಸ ಹುಡುಗರನ್ನು ಹಾಳುಮಾಡಿಬಿಡುತ್ತದೆ ಎದು. ದೇವರು ದಿಂಡರು ಭಕ್ತಿ ಗಿಕ್ತಿ ಎಲ್ಲಾ ನಿರ್ನಾಮ. ಜೊತೆಗೆ ನೂರಾರು ಹವ್ಯಾಸಗಳನ್ನು ಬೇರೆ ಕಲಿತು ಬಿಡುತ್ತಾರೆ. ನಿಮ್ಮ ಮನೆ ಜಮೀನು ಉಳಿಯಬೇಕಾದರೆ ಅವರ ಓದು ನಿಲ್ಲಿಸಿ. ಮದುವೆ ಗಿದುವೆ ಮಾಡಿ ಕೆಲಸಕ್ಕೆ ಹಚ್ಚು... ಈ ಶೂದ್ರ ಮಕ್ಕಳಿಗೆಲ್ಲಾ ಉಪನಿಷತ್ತು ಭಗವದ್ಗೀತೆ ಗಂಥವಾದರೂ ಗೊತ್ತಾಗುತ್ತದೆಯೇ?’’[೧೦] ( ಪು. ೭೪)

ಇಲ್ಲಿ ಅಕ್ಷರ ಜ್ಞಾನ ಮತ್ತು ವಿದ್ಯಾಭ್ಯಾಸ ಶೂದ್ರರಿಗೆ ಏಕೆ ? ಎಂಬ ಪ್ರಶ್ನೆಯಿದೆ. ಅಂದರೆ ವೇದ, ಉಪನಿಷತ್ತು, ವಿದ್ಯಾಬ್ಯಾಸ ಕೇವಲ ಬ್ರಾಹ್ಮಣರ ಸ್ವತ್ತು ಮಾತ್ರ ಎಂಬ ಅರ್ಥವು ಇದರಲ್ಲಿ ಸೇರಿದೆ.

‘‘ಹಾಂ - ಈ ಇಂಗ್ಲೀಷು ಭ್ರಾಂತು , ವೈದಿಕರಾದ ನಿಮ್ಮನ್ನು ಬಿಡಲಿಲ್ಲವೇ ? ಐತಾಳರೇ. ನೀವು ಮನೆಯಲ್ಲಿ ಅವನಿಗೆ ಅಧ್ಯಯನ ಮಾಡಿಸಿದರೂ ಚಿಂತೆಯಿಲ್ಲ. ಬದಲು ಯಾವಾವ ಜಾತಿಯವರು ಸೇರುವ ಸರಕಾರಿ ಶಾಲೆಗೆ ಮಗನನ್ನು ಕಳುಹಿಸುವುದಿಲ್ಲ. ಅಲ್ಲಿ ಯಾವ ಸುಟ್ಟ ಜಾತಿಯವರು ಬಂದರೂ ಬಂದರೇ, ಈಗ ನಮ್ಮ ಕರ್ನಾಟಕದ ಶಾಲೆಯನ್ನು ನೋಡಬಾರದೇ ? ಒಬ್ಬ ಹೊಸ ಮಾಸ್ತರ ಬಂದಿದ್ದಾನಂತೆ. ಸೇರೆಗಾರನೋ, ಸೆಟ್ಟಿಗಾರನೋ ಬ್ರಾಹ್ಮಣರ ಮಕ್ಕಳು ಅವನ ಬೆತ್ತದ ಪೆಟ್ಟನ್ನು ತಿನ್ನಬೇಕು - ಎಂದರೆ ಎಲ್ಲಿಂದೆಲ್ಲಿಗೆ ಬಂದಿತು ಕಾಲಗತಿ! ಎಂದರು ’’.[೧೧] (ಪು. ೧೩೫).

ಈ ಮಾತುಗಳಲ್ಲಿ ರಾಮ ಐತಾಳರಿಗೆ ಪೌರೋಹಿತ್ಯ ಬಗ್ಗೆ ನಿರಾಸೆ ತಾಳುವ ಮಗ ಲಚ್ಚನನ್ನು ಸರ್ಕಾರಿ ಇಂಗ್ಲಿಷ್ ಶಾಲೆಗೆ ಕಳುಹಿಸುವ ಶಾನುಭೋಗನೋ ಇಲ್ಲವೆ ತಹಶೀಲ್ದಾರನೋ ಆಗಬೇಕೆಂಬ ಹೆಬ್ಬಯಕೆ ಇದೆ.

‘‘ಆ ದಿನ ಸಂಜೆ ಐತಾಳರು ಮನೆಯ ಕಡೆಗೆ ಸಾಗಿದಾಗ ಹಿಗ್ಗು ಅಷ್ಟಿಷ್ಟಲ್ಲ. ತಾನೇ ಮಗನಾಗಿ ತಾನೇ ತಹಶೀಲ್ದಾರನಾಗಿ ಜಗತ್ತನ್ನು ತುಳಿದಾಡುವಂತೆ ಅವರ ಮನಸ್ಸು ಉಲ್ಲಾಸದಿಂದ ಕುಣಿದಾಡುತ್ತಿತ್ತು.’’[೧೨](ಪು. ೧೩೩)

''ಶಂಕರ ಐಗಳು ನಿರಾಶೆಯ ಪರಮಾವಧಿಯಿಂದ ಮನೆಗೆ ಮರಳಿದರು. ಮರಳುವಾಗ 'ನಾನು, ಇನ್ನೂ ನಾಲ್ಕು ಹೊಡೆ ಮಂಚಗಳನ್ನು ತರಿಸಿ ಹಾಕಿ. ನಾಲ್ಕು ಜಾತಿಗಳನ್ನು ಒಟ್ಟಿಗೆ ಬೆರೆಸಲು ಕಲಿಯಬೇಕಾಯಿತು. ಸೆಟ್ಟರಾದರೆ ಸೆಟ್ಟರು, ಭಟ್ಟರಾದರೆ ಭಟ್ಟರು ! ಸಕ್ಕೋಟ ದೊಡ್ಡಿಯನ್ನು ಮಾಡಿ, ಮಕ್ಕಳನ್ನು ಮೇಯಿಸುವುದೇ !' ಎಂಬ ನಿರಾಶೆಯ ಧ್ವನಿಯನ್ನು ಹೊರಡಿಸುತ್ತಾ ಮನೆಯ ಹಾದಿಯನ್ನು ಹಿಡಿದರು.'' [೧೩] (ಪು. ೧೩೬)

ಶಂಕರ ಐಗಳ ನಿರಾಶೆಯ ಮನೋಭಾವದ ಆಳದಲ್ಲಿ ಸಾಂಪ್ರದಾಯಿಕ ಶಿಕ್ಷಣ ಮತ್ತು ಆಧುನಿಕ ಶಿಕ್ಷಣದ ನಡುವೆ ದ್ವಂದ್ವತೆ ಇರುವುದನ್ನು ಕಾಣಬಹುದು.

ಲಚ್ಚ ಹೊಸ ಪರಿಸರಕ್ಕೆ ನಿಧಾನವಾಗಿ ಒಗ್ಗಿಕೊಳ್ಳುತ್ತ ಹೇಗೆ ತನ್ನ ತಂದೆ ರಾಮ ಐತಾಳರಿಗೆ ಹೇಗೆ ನಿಧಾನವಾಗಿ ದೂರ ಸರಿಯುತ್ತಾನೆ ಎಂಬುದನ್ನು ಗಮನಿಸಬಹುದು.

''ದಿನಗಳು ಸರಿದಂತೆ, ತಿಂಗಳುಗಳು ಸರಿದಂತೆ, ಈ ಹೊಸ ಜೀವನವು ಅವನಿಗೆ ತುಂಬಾ ಹಿಗ್ಗಿತು. ಪೇಟೆಯ ಜನರ ಚುರುಕುತನ, ಮಾತುಗಾರಿಕೆ ಅವನಲ್ಲಿಯೂ ಕಂಡು ಬಂದವು ಹೊಸ ಬಗೆಯ ಇಂಗ್ಲಿಷು ಓದಿನಲ್ಲೊಂದು ಹೆಮ್ಮೆಯೂ ಅವನಿಗೆ ಹುಟ್ಟಿತು. ಹಳ್ಳಿಯವರು ತನ್ನ ಹಾದಿಗೆ ಎದುರಾಗಿ ಬರುವಾಗಲೆಲ್ಲ ಗೆಳೆಯರೊಡನೆ ಹಟ ಹಿಡಿದು ಇಂಗ್ಲೀಷನ್ನೇ ಮಾತನಾಡುತ್ತಿದ್ದನು. ತಿಂಗಳು, ಮೂರು ತಿಂಗಳಿಗೊಮ್ಮೆ ಕೋಡಿಗೆ ಹೋದರೆ ಅಲ್ಲಿ ತನ್ನ ತಂದೆ ದೊಡ್ಡಮ್ಮನವರ ಎದುರಿಗೆ ಇಂಗ್ಲೀಷು ಮಾತನಾಡುವ ತೀಟೆ ತೋರಿಸುತ್ತಿದ್ದನು. ಹೋ ರಾಮ ಐತಾಳರ ಹಿಗ್ಗನ್ನು ಹೇಳಬೇಕೆ ? ಮಗನು ನಾಲ್ಕು ವರ್ಷಗಳಲ್ಲಿ ವಕೀಲಿ ಮಾಡಿಯಾನು - ಎಂಬ ಭರವಸೆಯುಂಟಾಯಿತು. ಅವರಿಗೆ ಇತ್ತ ಲಚ್ಚನಿಗೆ ಏನಾದರೂ ಮಾಡಿ ಶೀನಮಯ್ಯರ ಕಿರಿಯ ಮಗನಾದ ಒರಟನ ಜೊತೆಯಲ್ಲಿ ಇಂಗ್ಲೀಷನ್ನು ಕೊಚ್ಚಬೇಕೆಂದು ಹಟವಿತ್ತು.'' [೧೪] (ಪು. ೧೪೬)

ಐತಾಳ ಕುಟುಂಬದಿಂದ ಲಚ್ಚ ನಿಧಾನವಾಗಿ ದೂರ ಸರಿಯುತ್ತಾನೆ. ಅವರ ಆಶೋತ್ತರಗಳೇ ಬೇರೆ, ಇವನ ಆಶೋತ್ತರಗಳೇ ಬೇರೆ ಎನಿಸುತ್ತದೆ. ಅವರ ಜೀವನ ಶೈಲಿಗಳಲ್ಲಿ, ಮೌಲ್ಯಗಳಲ್ಲಿ ಬಿರುಕು ಕಾಣಿಸಿಕೊಳ್ಳುತ್ತದೆ. ಐತಾಳ ಕುಟುಂಬದವರಲ್ಲಿ ಲಚ್ಚ ಏಕಾಂಗಿಯಾಗಿ ಅವರೊಂದಿಗೆ ಬೆರೆಯಲಾರದವನಾಗಿದ್ದಾನೆ. ಅವರ ಸುಖದುಃಖಗಳನ್ನು ಹಂಚಿಕೊಳ್ಳಲಾರದೆ ಅವನ ಮೌಲ್ಯಗಳಿಗೇ ಅವನು ಅಂಟಿಕೊಂಡು

ತನ್ನ ವ್ಯಕ್ತಿತ್ವವನ್ನು ಉಳಿಸಿಕೊಳ್ಳಲಾರದೆ ತೆವಳುವುದನ್ನು ನೋಡಬಹುದು. ಲಚ್ಚ ಆಧಉನಿಕ ಶಿಕ್ಷಣವನ್ನು ಪಡೆದು ತನ್ನ ವ್ಯಕ್ತಿತ್ವವನ್ನು ಏಕೆ ರೂಪಿಸಿಕೊಳ್ಳಲಿಲ್ಲ ? ಎಂಬ ಪ್ರಶ್ನೆ ಕಾಡುತ್ತದೆ. ಅವನಲ್ಲಿ ಆಧುನಿಕತೆಯ ಒಳ ಜಗತ್ತಿನಲ್ಲಿರುವ ಊನಗಳು ಅಂಟಿಕೊಂಡು ಬದುಕನ್ನು ಅರ್ಥಮಾಡಿಕೊಳ್ಳಲಾರದ ತನ್ನ ಹೊಣೆಯನ್ನು ಹೊರಲಾರದ ದ್ವಂದ್ವತೆಯಲ್ಲಿ ಮುಳುಗುತ್ತಾನೆ. ರಾಮ ಐತಾಳರಲ್ಲಿ ಅವನ ಮೇಲೆ ಹೆಚ್ಚು ಅನುಮಾನ ಉಂಟು ಮಾಡುವಂತ ಮಾಡುತ್ತದೆ. ಈ ಜಾಡ್ಯವು ಕಾಲಾನಂತರದಲ್ಲಿ ಐತಾಳರ ಮನೆಯನ್ನೇ ಎರಡು ಜಗತ್ತುಗಳಾಗಿ ನಿರ್ಮಾಣ ಮಾಡುತ್ತದೆ.

ವರ್ಷ ಸರಿದಂತೆ ಲಚ್ಚನಿಗೆ ರಜೆಗೆ ಊರಿಗೇನೆ ಬರಬೇಕು ಎಂಬ ಆತುರವೂ ಕಡಿಮೆಯಾಯಿತು. ಶಾಲೆಗೆ ಉಳಿಯಿದ್ದರೂ ಉಡುಪಿಗೆ ಹೋಗಿ ತಿರುಗಾಡಿಕೊಂಡು ಬರಬೇಕೆಂಬ ಹಂಬಲವು ಬಲವಾಯಿತು. ರಜೆಯಲ್ಲಿ ಅಲ್ಲಿಗೆ ಹೋಗಿ ಮಾಡುವುದೇನು? ಎಂದು ಯಾರಾದರೂ ಕೇಳಿದರೆ ದಪ್ಪ ದಪ್ಪ ಪುಸ್ತಕಗಳನ್ನು ತೋರಿಸುತ್ತಾನೆ. 'ಮೊದಲಿನಂತಲ್ಲ ಈಗ'ತುಂಬಾ ಓದಲಿಕ್ಕಿದೆ'ಎಂಬ ಉತ್ತರ ಬರುತ್ತದೆ. ರಜೆಯ ಸಮಯ ಮನೆಯಲ್ಲಿ ಅವನು ಬಾರದೆ ಉಡುಪಿ, ಪಡುಮುನ್ನೂರುಗಳಲ್ಲಿ ಕಾಲಯಾನ ಮಾಡುವುದು ಸರೆಸೋತಿಗೆ ಸರಿಬೀಳಲಿಲ್ಲ. ಅವಳು ಆಗಾಗ ರಾಮನೊಡನೆ ನೋಡಿದೆಯಾ ನಮ್ಮ ಊರೇ ಅವನಿಗೆ ಹಿಡಿಸುವುದಿಲ್ಲ. ಅಲ್ಲವಾದರೆ ಮನೆಯೆಂಬ ಹಂಬಲ ಬೇಡವೇ ?' ಎಂದು ಹೇಳಿದರೆ ಓದಲಿಕ್ಕಿದೆಯೋ ಏನೋ ' ಎಂದು ಐತಾಳರು ಮಗನ ಪರವಾಗಿ ವಕಾಲತ್ತು ನಡೆಯಿಸುತ್ತಾರೆ. ಆದರೆ ಸರಸೋತಿಯು ಅದನ್ನಾವುದನ್ನೂ ಒಪ್ಪುವಂತಿಲ್ಲ. 'ನೀನು ಏನೇ ಹೇಳು, ಅವನಿಗೆ ನಮ್ಮ ಮನೆಯ ಊಟವೇ ಹಿಡಿಯುವುದಿಲ್ಲ. ನಾವೆಂಥ ತಿಂಡಿ ಮಾಡಿಕೊಟ್ಟರೂ, ಅವನು 'ಇದೊಂದಕ್ಕೂ ರುಚಿಯೇ ಇಲ್ಲ' ಎನ್ನುತ್ತಾರೆ.

''ಶೀನಮಯ್ಯನಂತವರಿಗೆ ವಿದ್ಯಾಭ್ಯಾಸವೆಂಬುದು ಸಂಸ್ಕೃತಿ ವಿದ್ಯಾಭ್ಯಾಸಕ್ಕಿಂತ ಕೀಳು ಎನ್ನುವ ಮಟ್ಟಿಗೆ ಆಲೋಚಿಸುತ್ತಾರೆ. ಇದಕ್ಕೆ ಕಾರಣ ಅವರ ಮಕ್ಕಳು ನಗರದ ಹೊಟೇಲು ಉದ್ಯಮದಲ್ಲಿ ಹಣ ಸಂಪಾದನೆ ಮಾಡುತ್ತಿರುವ ಪ್ರತಿಷ್ಠೆ ಅವರಿಗೆ ಗೌರವವನ್ನು ರಾಮ ಐತಾಳರ ಕುಟುಂಬದ ಮೇಲೆ ತಾತ್ಸಾರ, ಉದಾಸೀನತೆಯನ್ನು ತಂದುಕೊಡುತ್ತದೆ. ರಾಮ ಐತಾಳರ ಮಗಳನ್ನು ಶೀನಮಯ್ಯರ ಎರಡನೆ ಹುಡುಗನಿಗೆ ಮದುವೆ ಮಾಡಿಕೊಟ್ಟರೆ ಏನಾಗುತ್ತದೆ ಎಂಬ ಸುದ್ದಿ ಯಾರ್‍ಯಾರ ಮೂಲಕವೋ ಶೀನಮಯ್ಯರ ಕಿವಿಗೆ ಬಿದ್ದಿತು. ಅವರು ತಾವಾಗಿಯೇ ''ಇಂಗ್ಲೀಷು ಐತಾಳರ ಮನೆಯ ಹೆಣ್ಣು ತರಲು ನನಗೆ ಮರುಳೇ' ಎಂದು ಪ್ರತಿಯಾಗಿ ಹಂಗಿಸಿದರು.'' [೧೫] (ಪು. ೧೪೮)

ರಾಮ ಐತಾಳರ ಮಗಳ ಮದುವೆಯ ದಿವಸವೇ ಶೀನಮಯ್ಯರು ತನ್ನ ಎರಡನೇ ಮಗನಿಗೆ ದಿಬ್ಬಣವಿಡಿಸಿ ಸಂಘರ್ಷಕ್ಕೆ ತುತ್ತಾದರು. ಲಚ್ಚ ಇಂಗ್ಲೀಷ ವಿದ್ಯಾಭ್ಯಾಸದಲ್ಲಿ ನಪಾಸಾದನು. ಇವನ ಗೆಳೆಯನಾದ ಜನಾರ್ಧನ, ರಾಮಣ್ಣ, ನರಸಿಂಹ, ಎಲ್ಲರೂ, ಹರಟೆ, ಮಲ್ಲರಾಗಿ ಇವರ ವಾಮದಾರಿಗೆ ತುಪ್ಪಸುರಿದರು. ಲಚ್ಚನು ಮತ್ತು ಅವನ ಸ್ನೇಹಿತರು ಸುಬ್ರಾಯ ಉಪಾಧ್ಯಾಯರು ಕಿಟ್ಟನ ಹೋಟೆಲಿನಲ್ಲಿ ತಂಗಿ ಕೆಲಸವಿಲ್ಲದಾಗ ಇಸ್ಪೀಟಿನ ಆಟಕ್ಕೆ ಶುರುಮಾಡಿದರು. ಇದಿಷ್ಟೇ ಅಲ್ಲದೇ ಲಚ್ಚನು ಮತ್ತು ಅವನ ಸ್ನೇಹಿತರು ಹೋಟಿಲಿನ ಉಪಾಹಾರವನ್ನು ಅಣಕಮಾಡಿದರು. ಲಚ್ಚನು ಆಗಾಗ್ಗೆ ನೆಪಮಾಡಿಕೊಂಡು ಪುಸ್ತಕಕ್ಕೆ, ಪರೀಕ್ಷೆಗೆ ಎಂದು ಆಗಾಗ ದುಡ್ಡನ್ನು ಕೀಳುತ್ತಿದ್ದನು. ದುಡ್ಡನ್ನು ಪಡೆಯುವ ದಾರಿಯು ಕೆಲವು ತಂತ್ರಗಳ ಮೂಲಕ ತಿಳಿಯಿತು. ಕಣ್ಣೀರಿನ ಮೂಲಕವೋ ಇಲ್ಲವೇ ಹಠವನ್ನು ಸಾಧಿಸುವ ಮೂಲಕ ಹಣವನ್ನು ಪಡೆದು ಮೋಜು ಮಾಡುತ್ತಿದ್ದನು.

''ನಮ್ಮ ಹುಡುಗ ಇಂಗ್ಲೀಷು ಓದುತ್ತಾನೆ. ದೇವರು ನಡೆಯಿಸಿದರೆ ಬಿ.ಎ. ಮಾಡಿ ವಕಾಲತ್ತನ್ನೋ, ತಹಶೀಲಿಕೆಯನ್ನೋ ನೋಡಬಹುದು ? ಎಂದು ಬಹಳ ಹೆಮ್ಮೆ ಪಟ್ಟರೂ ಲಚ್ಚನನ್ನು ಕರೆದರೆ ಅವನು ಬಳಿಗೆ ಬರುವಂತೆಯೇ ಇರಲಿಲ್ಲ. ಅಥವಾ ಬಂದರೂ ಮೂಕಾಂಬಿಕೆಯ ಅವತಾರವಾಗಿದ್ದನು. ಐತಾಳರು ತೀರ ಜುಗುಪ್ಸೆಗೊಂಡು 'ಏನು ಮಾಣೀ, ಬಂದವರ ಹತ್ತಿರ ಒಂದು ಎಸ್-ಪಸ್ ಮಾತಡಾಲಿಕ್ಕೆ ಬಾರದ ಮೇಲೆ ನಿನ್ನ ಇಂಗ್ಲೀಷು ಯಾಕೆ ?'ಎನ್ನುತ್ತಿದ್ದರು. ಅನಂತರ ಲಚ್ಚ ಮದುವೆಯ ಚಪ್ಪರದಿಂದ ಕಣ್ಮರೆಯಾಗಿಯೂ ಅಲೆಯುತ್ತಿದ್ದ. ಮನೆಯ ಬೆನ್ನಿನಲ್ಲಿರುವ ಹೊನೆ ಮರಗಳ ಮೇಲೆಯೇ ಅವನ ವಸತಿ, ತಪ್ಪಿದರೆ ಕಡಲಿನ ದಂಡೆಯಿದೆ. ಮದುವೆಯ ಮನೆಯೆಂದ ಮೇಲೆ ಒಂದೆರಡು ಕೆಲಸಗಳಿರುತ್ತವೆಯೇ ? ಅವೆಲ್ಲಕ್ಕೂ ಐತಾಳರು ಪರರನ್ನೂ ಆಶ್ರಯಿಸಿಯೇ ಬೇಸತ್ತರು. 'ಇದೆಂಥ ಇಂಗ್ಲೀಷಪ್ಪಾ! ಬಂದವರಿಗೆ ಒಂದು ತಂಬಿಗೆ ನೀರನ್ನು ತಂದುಕೊಡಲು ಮನೆಯಲ್ಲಿ ಕುಳಿತಿರಬಾರದೇ ? ಇದು ಯಾರ ಮನೆ ? ಎಂದುಕೊಂಡರು. ಒಮ್ಮೆ ಅವರ ಕಣ್ಣೆದುರಿಗೇನೆ ಲಚ್ಚನು ಸಿಕ್ಕಿ, ಅವನಿಗೆ 'ತಾಂಬೂಲ ತಾ, ಗಂಗೋದಕ ತಾ 'ಎಂದರೆ ಸುಣ್ಣವಿಲ್ಲದೆ ಅಡಿಕೆಯಲ್ಲಿದೆಯೇ ತಂದಿರಿಸುತ್ತಿದ್ದ ಬೆಲ್ಲವಿಲ್ಲದೆಯೇ ಬರಿಯ ನೀರಿನ ಪಾತ್ರೆ ತಂದಿರುತ್ತಿದ್ದ. ಹೀಗಾಗಿ ರಾಮ ಐತಾಳರು ಇಂಗ್ಲೀಷ್ ಕಲಿತ ಮಕ್ಕಳು ಮನೆಯ ಕೆಲಸಕ್ಕೆ ಬರಲಾರವು ಎಂದು ಮನಸ್ಸಿನಲ್ಲೇ ನಿಶ್ಚಯ ಮಾಡಿಕೊಂಡರು.''[೧೬] (ಪು. ೧೫೪)

ರಾಮ ಐತಾಳರಲ್ಲಿ ಒಂದು ರೀತಿಯ ವಿಷಮ ಪರಿಸ್ಥಿತಿ ಅವರನ್ನು ಕಾಡುತ್ತಿದ್ದರೂ ಗ್ರಾಮೀಣ ಸಮಾಜದ ಸಂಸ್ಕೃತಿಯ ಬೇರುಗಳು ಅವರನ್ನು ಸಡಿಲಗೊಳಿಸದೆ ಗಟ್ಟಿಯಾಗಿ ಹಿಡಿದುಕೊಂಡಿವೆ. ಹೀಗಾಗಿಯೇ ಲಚ್ಚನು ಮಾಡುವ ತಪ್ಪುಗಳನ್ನು ಕ್ಷಮಿಸುತ್ತ ಲಚ್ಚನು ತಪ್ಪನ್ನು ತಿದ್ದಿಕೊಳ್ಳಬಹುದೆಂಬ ಆಶಾಮನೋಭಾವನೆಯಿಂದ ಇರುವುದನ್ನು ಕಾಣಬಹುದು. ಇನ್ನೊಂದು ರೀತಿಯಲ್ಲಿ ನಾವು ಅವಲೋಕಿಸುವುದಾದರೆ ರಾಮ ಐತಾಳರ ಕುಟುಂಬವು ಆಧುನಿಕ ಸಂಸ್ಕೃತಿಯ ಪ್ರತಿನಿಧಿಯಂತೆ ಇರುವ ಲಚ್ಚನ ಹುಳುಕುಗಳು ಎದ್ದು ಕಾಣುತ್ತಿದ್ದರೂ ಅವುಗಳನ್ನು ಕಡಿಯುವ ಕತ್ತರಿಸುವ ಸಾಮರ್ಥ್ಯ ಅವರಿಗಿಲ್ಲ.

ಲಚ್ಚನ ವ್ಯಕ್ತಿತ್ವವು ಸ್ವಾರ್ಥ, ಕಪಟ, ಮೋಜು, ಬದುಕಿನ ಬಗ್ಗೆ ಆಸಕ್ತಿ ಇಲ್ಲದಿರುವುದು, ಯಾರೊಬ್ಬ ಬಗೆಯು ಯೋಚಿಸದೆ ತನ್ನ ಬಗ್ಗೆ ಮಾತ್ರವೇ ತಲೆಕೆಡಿಸಿಕೊಳ್ಳುವ ಲಚ್ಚ ಆಧುನೀಕರಣದ ಒಡಕುಗಳೇ ತನ್ನ ಮೌಲ್ಯಗಳೆಂದು ನಂಬಿರುವಂತಿದೆ. ಹೀಗಾಗಿಯೇ ಅವನಿಗೆ ಗ್ರಾಮೀಣ ಸಂಸ್ಕೃತಿಯ ನೆಳಲುಗಳು ಅವನ ಬಿಸಿಲ ಬೇನೆಗೆ ಅಗ್ನಿಜ್ವಾಲೆ ತಂಗಿ ಸುಬ್ಬಿಗೆ ಮಾಡುವ ಉಪಚಾರವನ್ನು ಕಂಡು ಅಸೂಯೆ ಪಡುತ್ತಾನೆ.

''ಲಚ್ಚನಿಗೆ ಉಭಯ ಸಂಕಟಪ್ರಾಪ್ತವಾಯಿತು' ಇದೆಲ್ಲನ ಮಲಾಮತಿಯಪ್ಪಾ' ಎಂದೆನಿಸಿತು. ಬಾಯಿ ಚಪಲ ತರುವಂತಿಲ್ಲ. ಹೋಟೆಲಿಗೆ ಹೋಗುವಂತಿಲ್ಲ. ಕಿಟ್ಟನ ಬಾಯಿಂದ ತಪ್ಪಲು ಅವನು ಇತರರ ಮೂಲಕ ಕಮ್ತಿಯವರ ಹೋಟೆಲಿನ ಅಂಬೊಡೆಯನ್ನೋ, ಮತ್ತೊಂದನ್ನೋ ತರಿಸಿ ತಿನ್ನತೊಡಗಿದನು.''[೧೭] (ಪು. ೧೬೩)

''ಆದರೆ ಈಗಿನ ಅವನ ಮನಸ್ಸು, ಓದಿನ ಕಡೆಗೆ ಹರಿಯುವುದಕ್ಕಿಂತ ಬೇಟೆಯ ಕಡೆಗೆ ಹರಿಯುವುದು ಅಧಿಕವಾಯಿತು. ವಯೋಧರ್ಮಕ್ಕೆ ಸಮನಾಗಿ ಅವರ ಮಾತುಕತೆಗಳು ಹುಡುಗ ಪ್ರಪಂಚವನ್ನು ಮೀರಿ, ಶಾಲೆಗೆ ಬರುವ ಒಬ್ಬೊಬ್ಬರು ಹುಡುಗಿಯರ ವಿಮರ್ಶೆಗೆ ಹರಿಯಿತು. ಹಾದಿಯಲ್ಲಿ ತಿರುಗಾಡುತ್ತಿರುವಾಗ ಅವರ ಕಡೆಗೆ ಮನಸ್ಸು, ಲಚ್ಚನ ಗೆಳೆಯರಲ್ಲಿ ಜನ್ನನು ಹಿರಿಯ ಈ ವಿಷಯದಲ್ಲಿ ಮುಂದಾಳು. ಅವರೆಲ್ಲರ ಅನುದಿನದ ಮಾತುಗಳು ಅಶ್ಲೀಲ ಹಾಸ್ಯದಿಂದ ಉಕ್ಕಿದವು''[೧೮] (ಪು. ೧೭೬)

ಲಚ್ಚನ ಕೈಗಳು ತನ್ನ ತಂದೆಯ ಖಜಾನೆಯಿಂದ ಇಪ್ಪತ್ತು ಮೂವತ್ತು ರೂಪಾಯಿಗಳಷ್ಟು ನಗದನ್ನು ಕಣ್ಮರೆಯಾಗುವಷ್ಟು ಬೆಳೆದವು. ಇದಿಷ್ಟೇ ಅಲ್ಲದೇ,

ಜಲಜಮ್ಮನೊಂದಿಗೆ ಅನೈತಿಕ ಸಂಬಂಧವನ್ನು ಬೆಳೆಸಿದನು. ಜಲಜಾಕ್ಷಿಯ ಮೋಹ, ಲಚ್ಚನಿಗೆ ಹುಮ್ಮಸ್ಸನ್ನು ಉಂಟುಮಾಡಿದರೆ, ಜಲಜಾಕ್ಷಿಯ ದಾಂಪತ್ಯ ಜೀವನ ನುಚ್ಚುನೂರಾಯಿತು. ಒಮ್ಮೆ ಅರೆ ಕುರುಡು ಸರಸೋತಿಯ ಕಣ್ಣಿಗೂ ಜಲಜಾಕ್ಷಿ ಮತ್ತು ಲಚ್ಚ ಸರಿದು ಹೋದುದು ಗೋಚರಿಸಿತು.

ಲಚ್ಚನಿಗೆ ದಿನದಿಂದ ದಿನಕ್ಕೆ ಅವನಲ್ಲಿರುವ ಮೌಲ್ಯಗಳು ನಾಗರಹಾವಿನಂತೆ ಹೆಡೆ ಎತ್ತುತ್ತಿದ್ದವು. ಈ ಎಡೆಗೆ ಶೀನಮಯ್ಯ ಅವನ ನಾಲ್ಕನೆಯ ಮಗ ಒರಟ ಮತ್ತು ಶಂಕರ ಐತಾಳ ಎರವಲಾದರು.

''ನಾನು ಒಂದು ಹತ್ತು ರೂಪಾಯಿ ಹೆಚ್ಚಿಗೆ ಕೇಳಿದರೆ ಕಳುಹಿಸುವುದಿಲ್ಲ. ಇಲ್ಲಿ ರಾಶಿ, ರಾಶಿ, ರೂಪಾಯಿಗಳನ್ನು ಇಂಥ ಮನೆಗೆ ಯಾಕೆ ಸುರಿಯಬೇಕು ? ಇದೇನು ಒಂದು ಪೇಟೆಯೇ ಪಟ್ಟಣವೇ ? ಬೇಡವಾದಾಗ ಒಂದು ಕಾಸಿನ ಬಾಡಿಗೆಯೂ ಇಲ್ಲಿ ಬರಲಾರದು ಎಂದು ತಂದೆಯನ್ನು ಟೀಕಿಸಿಯೂ ಬಿಟ್ಟನು. ಅವನಿಗೆ ತನ್ನೊಬ್ಬನದೇ ಯೋಚನೆ ಉಳಿದವರ ಯೋಚನೆ ಇರಲಿಲ್ಲ.''[೧೯] (ಪು. ೨೦೧)

ಲಚ್ಚನಿಗೆ ವಕೀಲ ವಾಸುದೇವನ ಮಗಳಾದ ನಾಗವೇಣಿಯನ್ನು ಕೊಟ್ಟು ವಿವಾಹ ಮಾಡಲಾಯಿತು. ಲಚ್ಚನ ಮಾವನು ಎಫ್.ಎ. ಪರೀಕ್ಷೆಯನ್ನು ಓದಲು ಬಾಂಬೆಗೆ ಕಳುಹಿಸಿದನು. ಇವನ ಭಾವ ಸದಾಶಿವ ಅವನಂತೆ ಇಂಗ್ಲಿಷ್ ವಿದ್ಯಾಭ್ಯಾಸವನ್ನು ಪಡೆದಿದ್ದನು. ಲಚ್ಚನು, ಮಾದವನು ಮತ್ತು ನಾಗವೇಣಿಯು ಇಂಗ್ಲಿಷ್ ವಿದ್ಯಾಭ್ಯಾಸವನ್ನು ಪಡೆದಿದ್ದರು. ಆದರೆ ಈ ಮೂರು ಜನರನ್ನು ಹೊರತು ಪಡಿಸಿ ಲಚ್ಚನನ್ನು ಗಮನಿಸಿದರೆ ಆಧುನಿಕ ಸಂಸ್ಕೃತಿಯಲ್ಲಿರುವ ತನ್ನ ನೆಲೆಯ ಬೇರುಗಳು ಯಾವುವು ಎಂಬುದನ್ನು ಗುರುತಿಸದೇ ಅಂತರ್‌ಪಿಶಾಚಿಯಾಗಿ ಅಂಡಲೆಯಾಗಿ ಅಲೆದವು. ಇವನ ದುಶ್ಚಟಗಳು ರಾಕ್ಷಸ ಪ್ರವೃತ್ತಿಯಾಗಿ ಮಾರ್ಪಟ್ಟು ನಾಗವೇಣಿಯನ್ನು ಮೋಹಗೊಳಿಸಿ ಎರಡು ಮಕ್ಕಳ ತಂದೆಯಾಗುತ್ತಾನೆ. ನಾಗವೇಣಿಯು ಮೊದಲ ಮಗುವಿಗೆ ಗರ್ಭಪಾತಗೊಂಡು ತನ್ನ ಆರೋಗ್ಯವನ್ನು ಕೆಡಿಸಿಕೊಂಡು ತನ್ನ ತವರು ಮನೆ ಸೇರುತ್ತಾಳೆ. ಅಷ್ಟರಲ್ಲಾಗಲೇ ವೈದ್ಯರು ತಪಾಸಣೆ ಮುಗಿಸಿ ದೈಹಿಕ ಸಂಬಂಧ ಕೂಡದು ಎಂಬ ಎಚ್ಚರಿಕೆಯನ್ನು ಕೊಡುತ್ತಾರೆ. ಅಷ್ಟರಲ್ಲಿ ಲಚ್ಚನಿಗೆ 'ಹೆಂಗಳೆಯ ರೋಗ' ಬಂದಿರುವುದು ತಿಳಿಯುತ್ತದೆ.

ಹೀಗಾಗಿ ಈ ರೋಗದಿಂದ ಬೇಸತ್ತ ನಾಗವೇಣಿಯು ನಿರಾಶಳಾಗುತ್ತಾಳೆ. ನಾಗವೇಣಿಯ ಚಿಕ್ಕಪ್ಪ ನಾರಾಯಣಯ್ಯನವರು ಸಾಂತ್ವನವನ್ನು ಹೇಳುವುದರ ಮೂಲಕ ಲಚ್ಚನ ಕುಟುಂಬವನ್ನು ತಿರಸ್ಕಾರದಿಂದ ಕಾಣುತ್ತಾರೆ. ವಾಸುದೇವಯ್ಯರಂತೂ ತಮ್ಮ ಮಗಳ ಭವಿಷ್ಯವನ್ನು ತಾನು ಹಾಳು ಮಾಡಿದೆ ಎಂದು ನೊಂದುಕೊಂಡನು.

ಇದನ್ನು ಮನಗಂಡ ಲಚ್ಚನ ತಂದೆ ಸಹಾನುಭೂತಿಯಿಂದ ತನ್ನ ಸೊಸೆಯನ್ನು (ನಾಗವೇಣಿ) ಬರಮಾಡಿಕೊಂಡು ಪಿತ್ರಾರ್ಜಿತ ಆಸ್ತಿಯನ್ನು ಅವಳ ಹೆಸರಿಗೆ ವಿಲ್ ಮಾಡಿದನು.

ಲಚ್ಚನು ಬಾಂಬೆಗೆ ತೆರಳಿ ಕೆಲಸ ಹುಡುಕುತ್ತೇನೆಂದು ಹೊರಟನು. 'ನಾನು ಒಳ್ಳೆಯ ಹುದ್ದೆಯಲ್ಲಿದ್ದೇನೆ. ನಾನು ಅಲ್ಲಿಯೇ ಕೆಲಸ ಮಾಡತೊಡಗಿದರೆ ''ನನಗೆ ಬಡ್ತಿ ಸಿಗುವ ಸಾಧ್ಯತೆಯಿದೆ. ನಿನ್ನನ್ನು ಇಷ್ಟರಲ್ಲೇ ಕರೆಸಿಕೊಳ್ಳುತ್ತೇನೆ' ಎಂದು ನಾಗವೇಣಿಗೆ ಪತ್ರ ಬರೆದನು. ಕೆಲವು ದಿನ ಸಂದ ಮೇಲೆ' ನನಗೆ ದುಡ್ಡಿನ ಅವಶ್ಯಕತೆಯಿದೆ ದುಡ್ಡನ್ನು ಕಳುಹಿಸು' ಎಂದು ಬರೆದನು. ನಾಗವೇಣಿಯ ಬಳಿ ದುಡ್ಡಿಲ್ಲದ ಕಾರಣ ಮರು ಪತ್ರವನ್ನು ಬರೆಯಲಿಲ್ಲ. ಮತ್ತೆ ಲಚ್ಚನಿಂದ ಪತ್ರ ಬಂದಿತು. ನಾನು ಕೇರಳದಲ್ಲಿದ್ದೇನೆ. ನನಗೆ ಸ್ವಲ್ಪ ಹಣದ ಅವಶ್ಯಕತೆಯಿದೆ. ದುಡ್ಡನ್ನು ಕಳುಹಿಸು ಎಂದು ಬರೆದ.

ತನ್ನ ದೊಡ್ಡಮ್ಮ (ಪಾರೋತಿ) ಸಾವನ್ನಪ್ಪಿದಾಗಲೂ ಹಾಗೇ ಸರಸೋತಿ ಸಾವನ್ನಪ್ಪಿದಾಗಲೂ ಇವನ ಅಂತಃಕರಣ ಸಹಾನುಭೂತಿ ತೋರಿಸಲಿಲ್ಲ. ತನ್ನ ತಂದೆ ರಾಮ ಐತಾಳರು ಸಾವನ್ನಪ್ಪುವ ಕೊನೆ ಗಳಿಗೆಯಲ್ಲೂ ಸಹ ದ್ವೇಷ ಕಾರಿದನೇ ಹೊರತು ಪ್ರೀತಿಯನ್ನು ತೋರಲಿಲ್ಲ. ರಾಮ ಐತಾಳರ ಅಸ್ವಸ್ಥತೆಯನ್ನು ಮನಗಂಡ ಶೀನಮಯ್ಯರು 'ನಾನು ಏನು ಮಾಡಿದ್ದರೂ ಕ್ಷಮಿಸಬೇಕು' ಎಂದು ಅತ್ತರು. ಇದನ್ನು ನೋಡಿದ ಲಚ್ಚ ಶೀನಮಯ್ಯನ ಮೇಲೆ ಬೆಂಕಿ ಕಾರಿದನು. ಶೀನಮಯ್ಯನ ನಾಲ್ಕನೇ ಮಗ ಒರಟ ಲಚ್ಚನೊಂದಿಗೆ ಸೇರಿ ಸಹವಾಸ ದೋಷದಿಂದ ಸನ್ಯಾಸಿ ಕೆಟ್ಟನಂತೆ ಎನ್ನುವಂತೆ ಲಚ್ಚನೊಂದಿಗೆ ಸೇರಿ ಒರಟ ತನ್ನ ಆಸ್ತಿಯನ್ನು ಭಾಗಮಾಡಿದನು.

ಇವರಿಬ್ಬರೂ ಸೇರಿ ಹೋಟೆಲು ನಡೆಸುತ್ತೇವೆಂದು ಇರುವ ಸಂಪತ್ತನ್ನು ಲೂಟಿ ಮಾಡಿದರು. ಸಾಲಮಾಡಿದ್ದಕ್ಕಾಗಿ ಲಚ್ಚನನ್ನು ಪೋಲೀಸರು ಎಳೆದೊಯ್ಯುವ ಸಂದರ್ಭವೂ ಬಂದಿತು. ಅಂತಹ ಸಂದರ್ಭದಲ್ಲಿ ನಾಗವೇಣಿ ತನ್ನ ಚಿಕ್ಕಪ್ಪನಿಗೆ ಹೇಳಿ ಸಾಲವನ್ನು ಕೊಟ್ಟು ಮುಕ್ತಗೊಳಿಸಿದಳು.

ಲಚ್ಚನು ನಾಗವೇಣಿಯನ್ನು ದೇವಸ್ಥಾನಕ್ಕೆ ಕರೆದೂಯ್ಯುತ್ತೇನೆಂದು ಹೇಳಿ ಆಸ್ತಿಯನ್ನು ತನ್ನ ಹೆಸರಿಗೆ ವರ್ಗಾವಣೆಯಾಗುವಂತೆ ಸಹಿ ಮಾಡಿಸಿಕೊಂಡನು. ಹೋಟೆಲು ಉದ್ಯಮದಿಂದ ಲಾಭ ಬರುತ್ತದೆಂದು ಹೇಳಿ ಹೋದವನು ಮತ್ತೆ ಬರಲಿಲ್ಲ. ಕೊನೆಗೊಮ್ಮೆ ಪಿತ್ರಾರ್ಜಿತ ಆಸ್ತಿಯನ್ನು ಕಳೆದುಕೊಂಡ ನಾಗವೇಣಿ ಅನಾಥೆಯಾದಳು. ಕೊನೆಗೆ ಲಚ್ಚನ ಮಗ ರಾಮು, ಅಪ್ಪನನ್ನು ನೋಡಲು ಆತುರದಿಂದ ಬಂದರೆ ಇಸ್ಪೀಟು ಎಲೆಯನ್ನು ಜೋಡಿಸುವುದರ ಮೂಲಕವೇ ಮಗನನ್ನು ಯಾವಾಗ ಬಂದ ಎಂದು ಬೇರೊಬ್ಬರ ಮೂಲಕ ಕೇಳುತ್ತ ಇಸ್ಪೀಟು ಆಟದಲ್ಲಿ ಮಗ್ನನಾದನು.

ನಾಗರೀಕತೆಯ ಇತಿಹಾಸದಲ್ಲಿ ಮನುಷ್ಯನ ತಿಳುವಳಿಕೆ ವಿಕಾಸಗೊಂಡಂತೆ ಆತನ ಗ್ರಹಿಕೆಯ ಸಾಮರ್ಥ್ಯವು ವಿಕಸಿತಗೊಂಡಿದೆ. ಮಾನಸಿಕ ಇಲ್ಲದೆ ಬೌದ್ಧಿಕ ಕ್ರಿಯೆಯ ಮಿತಿ ಮೀರಿದಾಗ ಅನುಭವ ಏಕಮುಖವಾಗುತ್ತದೆ. ಆದ್ದರಿಂದ ಅದು ಅಪೂರ್ಣ ಅನುಭವ ಕೇವಲ ದೈಹಿಕವಾದಾಗ ಅದು ಕೇವಲ ಮೃಗೀಯವಾಗುತ್ತದೆ. ಇಂತಹ ಪಾತ್ರಕ್ಕೆ ತಕ್ಕ ಉದಾಹರಣೆ ಲಚ್ಚ.

ರಾಮು ಐತಾಳರು ಸಾಂಪ್ರದಾಯಿಕ ದೇಸಿಯತೆಗೆ ಅಂಟಿಕೊಂಡವರು. ಅಲ್ಲಿನ ಬೇರುಗಳನ್ನು ಭದ್ರವಾಗಿ ಹಿಡಿದುಕೊಂಡು ಶಾಶ್ವತ ಮೌಲ್ಯವಾಗಿ ಮಾಡಿಕೊಂಡವರು. ಸರಸೋತಿ, ಪಾರೋತಿ ಮತ್ತು ಸತ್ಯಭಾಮೆ ಇವರೂ ಸಹ ತಮ್ಮದೇ ಆದ ನೆಲೆಯಲ್ಲಿ ವ್ಯಕ್ತಿತ್ವದ ಬೇರುಗಳನ್ನು ಹಿಡಿದುಕೊಂಡಿದ್ದರು. ಇವರ ಮೇಲೆ ಅಷ್ಟಾಗಿ ಅನ್ಯಸಂಸ್ಕೃತಿಯ ಪ್ರಭಾವವನ್ನು ಕಾಣಲಾರವು. ದೇಸಿ ಸಂಸ್ಕೃತಿಯ ಮುಖಾಮುಖಿಯಲ್ಲೇ ತಮ್ಮ ಸೋಲುಗಳಿಗೆ ಪರಿಹಾರವನ್ನು ಕಂಡು ಹಿಡಿಯುವುದರ ಮೂಲಕ ಅನುಸಂಧಾನವನ್ನು ಬಯಸುತ್ತಾರೆ. ಅದಕ್ಕಾಗಿಯೇ ಲಚ್ಚನಲ್ಲಿ ಕಂಡುಬರುವ ಆಧುನೀಕರಣದ ಪ್ರಕ್ರಿಯೆ ಎಳೆಗಳನ್ನು ಗುರ್ತಿಸಿದರು. ಅವುಗಳನ್ನು ಧ್ವಂಸ ಮಾಡಲಾಗಲಿಲ್ಲ. ಇದು ದೇಸಿಯ ಸಂಸ್ಕೃತಿಯು ಮುಖಾಮುಖಿಯಾದಾಗ ಎದುರಿಸಲಾರದಂತಹ ದುರಂತ. !

ಲಚ್ಚನಿಗೆ ಸಿಕ್ಕ ಪರಿಸರ ಅಷ್ಟೇನು ಉತ್ತಮವಾಗಿರಲಿಲ್ಲ. ಚಿಕ್ಕಂದಿನಲ್ಲೇ ದೊಡ್ಡಮ್ಮನ ಪ್ರೀತಿಯಿಂದ ದೂರವಾದ, ಮನೆಯಲ್ಲಿನ ಕಟ್ಟಾಚಾರಗಳು ಇವನನ್ನು ಅಡ್ಡದಾರಿ ಹಿಡಿಯಲು ಪ್ರೇರೇಪಿಸುವುದು ಒಂದು ಮುಖವಾದರೆ, ಈಗಾಗಲೇ ಅವನಲ್ಲಿ ಮೊಳಕೆಯೊಡೆದ ವಾಮನ ಮಾರ್ಗಗಳು ಚಿಗುರಲು ಬಾಹ್ಯಕಾರಣಗಳು ಅವಕಾಶ ಮಾಡಿಕೊಟ್ಟವು. ಹಾಗಾಗಿ ಲಚ್ಚ ತನ್ನ ದೇಸಿಯ ಸಂಸ್ಕೃತಿಯ ಶಾಶ್ವತ ಮೌಲ್ಯಗಳಿಂದ ದೂರಾಗಿ ಆಧುನೀಕರಣದಲ್ಲಿ ತನ್ನ ಶಾಶ್ವತ ಮೌಲ್ಯವನ್ನು ಗುರ್ತಿಸದಾದ.

ಕಾನೂರು ಹೆಗ್ಗಡಿತಿಯಲ್ಲಿ ಬರುವ ರಾಮಯ್ಯ ಆಧುನಿಕ ಶಿಕ್ಷಣವನ್ನು ಪಡೆದು ಸುಸಂಸ್ಕೃತನಾಗಿದ್ದರೂ ಕಾಲಾನಂತರದಲ್ಲಿ ಅವನಿದ್ದಂತಹ ಕಾನೂರಿನ ಪರಿಸರವೇ ಅವನ ಮೇಲ್ಪದರದ ಆಧುನಿಕ ಮೌಲ್ಯಗಳನ್ನು ಧ್ವಂಸಮಾಡಿ ಮಾಟ ಮಂತ್ರ, ಮೂಢನಂಬಿಕೆ, ಬಲಿ, ಪೂಜೆ, ಭೂತ, ದೆವ್ವ, ಪಿಶಾಚಿ, ಇತ್ಯಾದಿಗಳನ್ನು ನಂಬುವಂತಾದ. ಯಾವೊಂದು ಸಂಸ್ಕೃತಿಯು ಒಂದು ಜನಾಂಗವನ್ನಾಗಲಿ ಅಥವಾ ವ್ಯಕ್ತಿಯನ್ನಾಗಲಿ ಗಟ್ಟಿಯಾದಂತಹ ಶಾಶ್ವತ ಮೌಲ್ಯಗಳನ್ನು ಹಿಡಿದಿಡಲಾಗದಿದ್ದರೆ ಆ ಜನಾಂಗ ವ್ಯಕ್ತಿ ತನ್ನತನವನ್ನು ಕಳೆದುಕೊಂಡು ನಾಶವಾಗುತ್ತಾನೆ.

ನಾಗವೇಣಿಯ ಮಗ ರಾಮರಾವ್ ಓದನ್ನು ಮುಗಿಸಿಕೊಂಡು ಮದರಾಸಿಗೆ ಹೋಗಿ ಬಿ.ಎ. ಕಲಿಯಲು ಆರಂಭಿಸಿದನು. ಅವನ ಅಗಲಿಕೆಯಿಂದ ನಾಗವೇಣಿಯ ಬಾಳು ಬರಡಾದಂತೆ ಕಂಡಿತು. ಹುಡುಗನು ತನ್ನ ಓದಿಗೆ ಬೇಕಾದ ಹಣವನ್ನು ತಾನೇ ಸಂಪಾದಿಸಿಕೊಂಡು ತಾಯಿಗೂ ಕೊಂಚ ಕಳುಹಿಸಿದನು. ಮದರಾಸಿನಲ್ಲಿಯೇ ಇದ್ದ ನಾಗವೇಣಿಯ ತಂಗಿ ಕೃಷ್ಣೆಯು ಅವಳ ಗಂಡ ಮಾಧವನು ರಾಮನಿಗೆ ನೆರವಾದರು. ಹೀಗೆ ಅವನು ಸ್ವಾವಲಂಬನೆಯಿಂದ ಕಲಿತು ಬಿ.ಎ. ಕಟ್ಟಿದನು. ಪರೀಕ್ಷೆ ಆಗುವುದರೊಳಗಾಗಿ ಉಪ್ಪಿನ ಸತ್ಯಾಗ್ರಹ ಪ್ರಾರಂಭವಾಯಿತು. ರಾಮನು ಆವೇಶಗೊಂಡು ತನ್ನ ತಾಯಿಯ ಸಂಕಟ ಎಂತಹದಿರಬಹುದೆಂದು ಲೆಕ್ಕಿಸದೆ ನುಗ್ಗಿ ಖೈದಿಯಾಗಿ ವೆಲ್ಲೂರು ಜೈಲನ್ನು ಕಂಡನು. ಅವನನ್ನೇ ಸದಾ ಹಂಬಲಿಸುತ್ತಿದ್ದ ಊರಲ್ಲಿದ್ದ ತಾಯಿಗೆ ಈ ಸುದ್ದಿ ಸಿಡಿಲಾಯಿತು. ಆಗ ಅವಳ ಸಂಕಟ ಕಡಲಿನಷ್ಟು ವಿಶಾಲವಾಯಿತು. ಮಗನು ತನ್ನ ಕೈ ಬಿಡನು ಎಂಬ ನಂಬಿಕೆ ಅವಳಿಗೆ ಉಂಟಾಯಿತು. ರಾಮನು ಜೈಲಿನಿಂದ ಹೊರಗೆ ಬಂದು ತನ್ನ ಕೆಲಸಕ್ಕೆ ತಾನೇ ನಾಚಿ ಓದು ಪೂರ್ತಿಯಾಗದೇ ತಾಯಿ ಬಳಿಗೆ ಧಾವಿಸಿದನು. ಮತ್ತೊಂದು ಸಲ ಮದರಾಸಿಗೆ ಬಂದು ಬಿ.ಎ. ಕಟ್ಟಿ ಯಾವ ರಾಜಕೀಯ ಅತಿರೇಕಕ್ಕೂ ಮನಸ್ಸು ಕೊಡದೆ ಪರೀಕ್ಷೆಯಲ್ಲಿ ಜಯಗಳಿಸಿದನು.

ಐತಾಳರ ಮೊಮ್ಮಗ ರಾಮನ ಕಾಲಕ್ಕೆ ಆಧುನೀಕರಣದ ಪ್ರಕ್ರಿಯೆ ಆರಂಭದ ಗೊಂದಲಗಳನ್ನು ಸ್ವಲ್ಪ ಮಟ್ಟಿಗೆ ನಿವಾರಿಸಿಕೊಂಡಿದೆ. ಆಧುನೀಕರಣ ಜೀವನದ ಸಾಧ್ಯತೆಗಳನ್ನು ವಿಸ್ತರಿಸುತ್ತಿದ್ದಂತೆಯೇ ಪರಂಪರೆಯ ಅವನತಿ ಚುರುಕುಗೊಡಯ ಹೊಸ ಸಮಸ್ಯೆಗಳು ಉದ್ಭವಿಸಿದವು. ರಾಮನ ನಿರುದ್ಯೋಗ ಇಂತಹ ಒಂದು ಸಮಸ್ಯೆ ಇಂತಹ ಪರಿಸ್ಥಿತಿಯಲ್ಲಿ ಅವನು ಐತಾಳರಂತೆ ಜೀವನವನ್ನು ಎದುರಿಸಲಾರ. ಪಾರೋತಿ,

ಸರಸ್ವೋತಿ,ಯವರ ನಿಷ್ಠುರ ದುಡಿಮೆ ರಾಮನಿಂದ ಸಾಧ್ಯವಾಗದು. ಆದರೆ ಆಧುನಿಕ ವಿದ್ಯಾಭ್ಯಾಸದ ಅನೇಕ ಇತ್ಯಾತ್ಮಕ ಪರಿಣಾಮಗಳನ್ನು ರಾಮನ ವ್ಯಕ್ತಿತ್ವದಲ್ಲಿ ಕಾಣಬಹುದು. ಅವನಲ್ಲಿ ಕಾಣುವ ಹೊಸ ರಾಷ್ಟ್ರೀಯ ಪ್ರಜ್ಞೆಯನ್ನು ಕೆಳಗಿನ ಮಾತುಗಳಲ್ಲಿ ಕಾಣಬಹುದು.

''ಇದು ಮದರಾಸಿನಲ್ಲಿ ರಾಮನ ನಾಲ್ಕನೇ ವರ್ಷ. ಮೈಕಲ್ ಮಾಸ್ ರಜೆ ಬಂದಿದೆ. ಬಿ.ಎ.ಯ ಗಿರ ರಾಮನಿಗೆ ಹಿಡಿದಿದೆ. ಆಗಾಗ ಅವನು ಒಬ್ಬಿಬ್ಬರ ಗೆಳೆಯರ ಮನೆಗೆ ಹೋಗಿ ಅಲ್ಲಿ ವ್ಯಾಸಂಗ ಮಾಡುತ್ತಾನೆ. ಅವನಲ್ಲಿ ಇಲ್ಲದ ಪುಸ್ತಕಗಳನ್ನು ಅವರಿಂದ ಪಡೆದು ಓದುತ್ತಾನೆ.''[೨೦] (ಪು. ೩೩೨)

''ಒಂದು ದಿನನಿತ್ಯದ ಮಿತ್ರನಾದ ರಾಜಮಣಿ ಐಯ್ಯರ್‌ನ ಮನೆಗೆ ಹೋಗಿ ಸಾಂಡರ್‌ಲೆಂಡ್‌ರವರ 'ಇಂಡಿಯಾ ಇನ್ ಬಾಂಡೇಜ್' ಎಂಬ ಪುಸ್ತಕವನ್ನು ಓದುತ್ತಾನೆ. ಅಂದಿನಿಂದ ರಾಮನ ತಲೆಯಲ್ಲಿ ಬಿ.ಎ. ಯೊಡನೆ ಭಾರತವೂ ನಲಿಯತೊಡಗಿತು. ಮಾತುಗಾರರಾದ ಗೆಳೆಯರೊಡನೆ 'ಪಾಲಿಟಿಕ್ಸ್‌ಗೆ' ಆತ ಕೈಯಿಕ್ಕಿದನು. ದಿನ ದಿನದ ಹಿಂದೂಪತ್ರಿಕೆಯನ್ನು 'ಆ' ದಿಂದ 'ಕ್ಷ'ತನಕ ಓದಿದನು. ಸಾಲುದುದಕ್ಕೆ ಆ ಸಮಯದಲ್ಲಿ ದೇಶದಲ್ಲೆಲ್ಲ ರಾಷ್ಟ್ರೀಯ ಚಳುವಳಿಯು ಇನ್ನೊಮ್ಮೆ ಕಾವುಗೊಂಡು ಕುದಿಯುತ್ತಿತ್ತು. ೧೯೨೧ರ ಅಸಹಕಾರ ಚಳುವಳಿ ಕಾಲದಲ್ಲಿ ಅವನು ಸಣ್ಣ ಬಾಲಕನಾಗಿದ್ದ. ಆಗ ಶಾಲೆಯ ಹುಡುಗರನ್ನು ಒಡಗೂಡಿಕೊಂಡು 'ಗಾಂಧೀಕಿ ಜೈ' ಮಾಡಿದುದು ಎಂದೋ ಮರವೆಯಾಗಿತ್ತು. ಈಗ ಯಾತ್ರೆ ಯೌವನದ ಕುದಿಯಲ್ಲಿ ರಾಷ್ಟ್ರಭಕ್ತಿಯ ಉಕ್ಕೊ ಸೇರಿತು. ತಾನು ತರುಣ ವಯಸ್ಕನಾಗಿದ್ದರೂ ಬರಿಯ ತನ್ನೊಬ್ಬನ ಪಾಡನ್ನು ಯೋಚಿಸುತ್ತಾ ಕುಳಿತು, ನಾಡಿನ ಪಾಡಿಗೆ ಕುರುಡಾಗಿದ್ದೇನಲ್ಲ ಎಂದೆನಿಸಿತು. ಅವನಿಗೆ ಸರಿ ಮದ್ರಾಸಿನ ಕಿರುವೆಲ್ಲಿ ಕೇಣಿಯ ಕಡಲ ತೀರದಲ್ಲಿ ನಿತ್ಯ ಪ್ರಚಂಡ ಜನಸಮುದಾಯ ಸೇರಿ ಇಂಡಿಯ ಸರಕಾರವನ್ನು ತಮ್ಮ 'ಇಂಕಿಲಾಬ್ ಜಿಂದಾಬಾದ್' ನಿಂದ ಸುಡುವೆವು ಎಂದು ಕಂಠ ಶೋಷಣೆ ಮಾಡುತ್ತಿದ್ದ ಕಾಲವದು. ಇವನೂ ದೇಶಭಕ್ತಿಯ ಕಾವಿನಿಂದ ಅಲ್ಲಿಗೆ ಹೋಗತೊಡಗಿದ. ಸ ತ್ಯಮೂರ್ತಿ ಪ್ರಕಾಶವ್ ಮೊದಲಾದ ದೇಶಭಕ್ತರ ಉಪನ್ಯಾಸಗಳನ್ನು ಕೇಳಿ ರೌದ್ರಾವೇಶವನ್ನು ತಾಳತೊಡಗಿದ.''[೨೧](ಪು. ೩೩೨-೩೩೩)

ವಸಾಹತು ಶಾಹಿ ಆಳ್ವಿಕೆಯ ಫಲವಾಗಿ ಮೂಡಿ ಬಂದ ಆಧುನಿಕ ಇಂಗ್ಲೀಷ್ ಶಿಕ್ಷಣ ಅದೇ ವಸಾಹತು ಶಾಹಿ ಆಳ್ವಿಕೆಯಲ್ಲಿರುವ ಒಡಕುಗಳನ್ನು ವಿರೋಧಿಸುವ ತನ್ನತನವನ್ನು ಗುರ್ತಿಸಿಕೊಳ್ಳುವ ರಾಜಕೀಯ ಪ್ರಜ್ಞೆಯನ್ನು ಉಂಟು ಮಾಡಿದ್ದು ತೃತೀಯ

ಜಗತ್ತಿನ ಆಧುನೀಕರಣದ ಪ್ರಕ್ರಿಯೆಯಲ್ಲಿನ ಅತ್ಯಂತ ಕುತೂಹಲಕಾರಿಯಾದ ಅಂಶ ಇಂಗ್ಲಿಷ್ ಶಿಕ್ಷಣ ತಂದ ಹೊಸ ವಿಚಾರ, ವಿಕೃತಿಗಳನ್ನು ಸೂಕ್ಷ್ಮವಾಗಿ ದಾಖಲು ಮಾಡಿರುವಂತೆ ಕಾರಂತರು ಈ ಆಧುನಿಕ ಶಿಕ್ಷಣದಗ ಮೂಲಕ ದೊರಕಿದ ಸ್ವ ಅರಿವು, ಆತ್ಮವಿಮರ್ಶೆ ಮತ್ತು ಹೊಸ ಸಾಮಾಜಿಕ ಮತ್ತು ರಾಜಕೀಯ ಪ್ರಜ್ಞೆಯನ್ನು ಅಷ್ಟೇ ಸೂಕ್ಷ್ಮವಾಗಿ ದಾಖಲಿಸುತ್ತಾರೆ.

ಆಧುನೀಕರಣದ ಮೊದಲ ಘಟ್ಟದಲ್ಲಿ ಇಂಗ್ಲಿಷ್ ವಿದ್ಯಾಬ್ಯಾಸದಲ್ಲಿ ತೊಡಗುವುದೇ ಆಯ್ಕೆಯ ಒಂದು ಪ್ರಶ್ನೆಯಾಗಿದ್ದರೆ ಕ್ರಮೇಣ ಅದೇ ಒಂದು ಮೌಲ್ಯವಾಗುತ್ತದೆ. ಹಿಂದೆ ಸಾಂಪ್ರದಾಯಿಕ ಮನೋಧರ್ಮದವರು ತರುಣರನ್ನು ಇಂಗ್ಲಿಷ್ ಶಿಕ್ಷಣದಿಂದ ಪಾರುಮಾಡಲು ಯತ್ನಿಸಿದರೆ, ಅದೇ ಜನ ಇಂದು ತರುಣರನ್ನು ಗಾಂಧೀಜಿಯ ಪ್ರಭಾವದಿಂದ ಹೇಗೆ ಪಾರುಮಾಡುವುದೆಂಬ ಆತಂಕದಲ್ಲಿದ್ದಾರೆ.

ಸಾಮಾಜಿಕ ಮೌಲ್ಯಗಳಾದ ಜಾತಿ, ವರ್ಗ, ಧರ್ಮಗಳನ್ನು ಮಾತ್ರ ಒಂದು ಪರಂಪರಾಗತ ಸಮಾಜಕ್ಕೆ ಈಗ ರಾಜಕೀಯ ಪಕ್ಷ, ರಾಜಕೀಯ ಚಳುವಳಿ, ರಾಜಕಾರಣಿಗಳು, ರಾಷ್ಟ್ರೀಯತೆ ಇವೆಲ್ಲವೂ ಆಧುನಿಕ ವಿಚಾರಗಳೇ ಇಂಗ್ಲಿಷ್ ವಿದ್ಯಾಭ್ಯಾಸ ಅದು ತಂದು ಕೊಡಬಹುದಾದ ಸುರಕ್ಷಿತ ಉದ್ಯೋಗಾವಕಾಶ ಇವುಗಳನ್ನು ಬಿಟ್ಟು ಗಾಂಧೀಜಿ. ಕಾಂಗ್ರೆಸ್ಸು ಸ್ವರಾಜ್ಯಗಳ ಬಗ್ಗೆ ಮಾತನಾಡುವುದು ಭಯ ಆತಂಕಗಳನ್ನು ಹುಟ್ಟಿಸುವುದು ಹಾಗಾಗಿ ನಮ್ಮ ರಾಷ್ಟ್ರೀಯ ಚಳುವಳಿಯ ಸಂದರ್ಭದಲ್ಲಿ ಆಧುನೀಕರಣ ಪ್ರಕ್ರಿಯೆ ಕಂಡ ದ್ವಂದ್ವಗಳು ಅರ್ಥಪೂರ್ಣವಾಗುತ್ತವೆ. ರಾಮನ ಆದರ್ಶಕ್ಕೆ ಎದುರಾದ ಮುಖ್ಯ ಪ್ರಕ್ರಿಯೆಗಳನ್ನು ಗಮನಿಸೋಣ.

''ರಾಜಮಣಿಯು ನಗುತ್ತ ರಾಮು, ನೀನು ಸ್ವತಂತ್ರ' ತಾಯ ಮೇಲೆ ನಿನ್ನ ಯಜಮಾನಿಕೆ ನಡೆಯಬಹುದು. ಆದರೆ ನನಗೆ ಪರೀಕ್ಷೆಗೆ ಹಣ ಕಟ್ಟಬೇಕಾದರೆ ಅಪ್ಪನಿಂದ ಬರಬೇಕು. ಮನೆಯಲ್ಲಿ ಹೆಂಡತಿ ಮ ಕ್ಕಳು ಇದ್ದಾರೆ. ಅವರ ಅನ್ನಕ್ಕೆ ಸೊನ್ನೆ ಬರಬಾರದಲ್ಲ. ಎಂದನು.''[೨೨] (ಪು. ೩೩೩)

''ಮೂರು ದಿನಗಳ ಬಳಿಕ ಅವನ ಮೆಚ್ಚಿಕೆಯ ಪ್ರೊಫೆಸರ್ ಸಾಹೇಬರೇ ಅವನನ್ನು ಬಳಿಗೆ ಕರೆದರು. ''ನಿನ್ನಂಥ ಬುದ್ಧಿವಂತ ವಿದ್ಯಾರ್ಥಿ ಈ ರಾಜಕೀಯದ ಭ್ರಮೆಗೆ ಬೀಳುವುದು ನನಗೆ ಆಶ್ಚರ್ಯವೆನಿಸುತ್ತದೆ ಎಂದಾದರೂ ಉಪ್ಪು ಮಾಡಿ ಸ್ವರಾಜ್ಯ ಸಿಕ್ಕೀತೆ

ತಮ್ಮ ಉಪ್ಪನ್ನು ತಾವು ಮಾಡುತ್ತಿರುವ ಎಷ್ಟು ರಾಜ್ಯಗಳು ಇನ್ನು ದಾಸ್ಯದಲ್ಲಿಲ್ಲ!.....ಹುಚ್ಚನಂತೆ ಈ ವಯಸ್ಸು ಅನುಕೂಲತೆಗಳನ್ನು ಕೆಡಿಸಿಕೊಳ್ಳಬೇಡ. ಮುಂದೆ ನೀನು ಬೆಳೆದಾಗ ನಿನ್ನ ಸ್ವಂತ ಅನುಭವ ಹೇಳಿದರೆ ಬೇಕಾದಂತೆ ಮಾಡು. ಇದು ಬರಿಯ ಆವೇಶ' ಎಂದರು.''[೨೩] (ಪು. ೩೩೩-೩೩೪)

''ನಾಗವೇಣಿಯ ತಲೆಯ ಮೇಲೆ ಆ ದಿನ ಬೇರೆ ಸಿಡಿಲು ಬಡಿಯಬೇಕಿದ್ದಿರಲಿಲ್ಲ, ಕಾಗದವನ್ನು ಓದಿದ ಅವಳಿಗೆ...ರಾಷ್ಟ್ರಭಕ್ತಿಯ ಕತೆಗಳನ್ನು ತಿಳಿದವಳು. ಗಾಂಧಿಯ ಹೆಸರನ್ನು ಬಲ್ಲವಳು ; ಏಕೆ ಅದೇ ವೇಳೆ ಪೋಲೀಸರ ಭಯವಿಲ್ಲದೆ ಕೋಡಿ ಊರಿನ ಬೆಸ್ತರು ಉಪ್ಪು ಮಾಡತೊಡಗಿದ್ದರು. ಉಳಿದವರು ಪ್ರದರ್ಶನಕ್ಕೆ ಸತ್ಯಾಗ್ರಹ ಮಾಡಿದ್ದರೆ ಇವರದು ಬರಿಯ ಅನ್ನಾಗ್ರಹವಾಗಿತ್ತು. ಅದೆಲ್ಲವನ್ನು ವಿಚಿತ್ರ ಕತೆಯಾಗಿಯೂ ಪರಿಹಾಸ್ಯವಾಗಿಯೂ ತಿಳಿದವಳಿಗೆ ಮಗನ ಬಂಧನವು ವ್ಯಥೆಯನ್ನುಂಟುಮಾಡಿತು. ಅದರಲ್ಲೂ ರಾಮನು ಗಾಯಗೊಂಡು ನೊಂದಿರುವುದು ಬೇರೆ. ಆದರೆ ಬಿ.ಎ. ಓದನ್ನು ಕೆಡಿಸಿ ಕೊಂಡು ಮುಂದಿನ ಜೀವನದ ಹಾದಿಯನ್ನು ಧ್ವಂಸ ಮಾಡಿ ಸೆರೆಮನೆಗೆ ಹೋದನು. ಮಗ ನಾಳೆಯೂ ಹೀಗೆಯೇ ತಾಯ ನೆನಪಿಲ್ಲದೆ ಅಲೆದು ; ತನ್ನಿಂದ ಆತನು ದೂರಾದರೆ ಯಾರೊಡನೆ ಸತ್ಯಾಗ್ರಹ ಮಾಡಬೇಕು, ಎಂಬ ಅತಿ ವ್ಯಥೆಯು ಅವಳನ್ನು ಕಾಡಿತು. ಕೊನೆಗೆ ಅಂದು ಕೊಂಡಳು ಅಮ್ಮಾ, 'ನನ್ನ ಹಣೆಯ ಬರಹಕ್ಕೆ ನನಗೆ ಯಾರಿಂದಲೂ ಸುಖ ಸಿಗಲಾರದು. ನಾನು ಏನೋ ಪಾಪ ಮಾಡಿ ಬಂದಿರಬೇಕು.ಅದರಿಂದಲೇ ಈ ವ್ಯಥೆ ! ಇನ್ನು ರಾಮನೇನು ನನೆಗ ಹೆಚ್ಚಿನ ಸುಖ ಕೊಟ್ಟಾನು'! ಎಂದುಕೊಂಡಳು. ತಿ ೯ ರ ಾ ಕಠಿಣವಾದ ತೀರ್ಮಾನ ವದು. ಆದರೆ ನಿಜ ಸ್ಥಿತಿಯು ಬೇರೆಯೇ ಇತ್ಯರ್ಥಕ್ಕೆ ದಾರಿ ಮಾಡಲಿಲ್ಲ''.[೨೪] (ಪು. ೩೩೬)

ರಾಮನ ಜಗತ್ತು ಕಾದಂಬರಿಯ ಉಳಿದೆಲ್ಲ ಮುಖ್ಯ ಪಾತ್ರಗಳ ಜಗತ್ತಿಗಿಂತ ವಿಶಾಲವಾದಂತಹವು. ಹಾಗಾಗಿ ಅವನು ಪಿಟೀಲು ನುಡಿಸುವುದನ್ನು ಕಲಿಯುತ್ತಾನೆ. ಚಿತ್ರಕಲೆಯನ್ನು ಬಿಡಿಸಬಲ್ಲ ಮಾಸ್ತರ ಕೆಲಸವನ್ನು ಮಾಡಬಲ್ಲ ಮತ್ತು ಹೋಟೆಲು ಕೆಲಸವನ್ನು ಮಾಡಬಲ್ಲ. ತನ್ನ ಅಜ್ಜರಾಮ ಐತಾಳರಷ್ಟು ರಾಮ ಗಟ್ಟಿಯಾಗಿ ಕಾಣದಿದ್ದರೆ ಅವರೀರ್ವರ ಕಾಲ, ದೇಶ, ಜೀವನ, ಸಂದರ್ಭಗಳಲ್ಲಿರುವ ವ್ಯತ್ಯಾಸವೇ ಅದಕ್ಕೆಕಾರಣ. ತನ್ನ ಜೀವನವು ಬದಲಾದ ಸಂದರ್ಭದಲ್ಲಿ ರಾಮ ತನ್ನ ಅಜ್ಜ ಮತ್ತು ಅಪ್ಪನಿಗಿಂತ ಬೇರೆಯೇ ಆದ ಹೆಜ್ಜೆ ಇಡಬೇಕಾಗಿದೆ ಅಜ್ಜನ ಮಾರ್ಗ ಅಪ್ಪನ ಮಾರ್ಗ ಇವೆರಡೂ ಅವನ ಜೀವನಕ್ಕೆ ಸಫಲತೆ ತಂದುಕೊಡಲಾರವು. ತನ್ನ ಮಾರ್ಗಏನೆಂದು ಅವನಿಗೆ

ಸ್ಪಷ್ಟವಾಗುತ್ತಿಲ್ಲ. ಹೀಗೆ ರಾಮ ನವ ಜನಾಂಗದ ಓರ್ವಪ್ರತಿನಿಧಿಯಾಗಿ ಕಂಡುಬರುತ್ತಾನೆ. ಅವನಲ್ಲಿ ಆಧುನಿಕ ಶಿಕ್ಷಣದ ಸಂಸ್ಕಾರವು ಅವು ಸೃಷ್ಟಿಸಿರುವ ಸಂದಿಗ್ಧವೂ ಇದೆ.

ಅನಂತ ಮೂರ್ತಿಯವರು ಹೇಳುವಂತೆ, ''ಎಲ್ಲಾ ಮೌಲ್ಯಗಳನ್ನು ದುಡಿಮೆಯ ನಿಷ್ಠುರ ಅನಿವಾರ್ಯತೆಯಲ್ಲಿ ಹುಟ್ಟುವುದೆಂದು ಕಾಣುವ ಕಾರಂತರು ವಿರಾಮದ ಇತ್ಯಾತ್ಮಿಕ ಅಂಶವಾಗಿ ರಾಮು ಮತ್ತು ನಾಗವೇಣಿಯರನ್ನು ಕಡಲೆದುರು ಪಿಟೀಲು ಕೊಟ್ಟು ಕೂರಿಸುತ್ತಾರೆ.'' [೨೫](ಪು. ೧೭೨)

ಕಾದಂಬರಿಯ ೩ನೇ ಭಾಗ ನಾಗವೇಣಿಯ 'ಭಾವಮಯ ಜೀವನವು ಅನುಭವದ ಜೀವನವಾಗಿ ಮಾರ್ಪಾಟು ಹೊಂದುವ ಪ್ರಕ್ರಿಯೆಯ ದಾಖಲೆಯಾಗಿದೆ'. ನಾಗವೇಣಿ ಮತ್ತು ಆಕೆಯ ಮಗ ರಾಮು ಇದರ ಸಂಬಂಧಗಳು ಹೊಸ ಒಳನೋಟಗಳನ್ನು ಹೊಳೆಯಿಸುವಂತಿವೆ. ಈ ಸಂಬಂಧ ಅದರ ಶುದ್ಧ ಅರ್ಥದಲ್ಲಿ ಲೈಂಗಿಕ ಸಂಬಂಧವೇ ಎಂದು ಪೊಲಂಕಿ ರಾಮಮೂರ್ತಿ ಅಭಿಪ್ರಾಯ ಪಡುತ್ತಾರೆ.

''ಗಂಡನಿಲ್ಲದ ನಾಗವೇಣಿ ತನ್ನ ಮಗನಲ್ಲಿ ಗಂಡನನ್ನೇ ಕಾಣುವಳು' ಕಡಲ ತೀರದಲ್ಲಿ ಸೂರ್ಯಾಸ್ತದ ಗಳಿಗೆಯಲ್ಲಿ ಸಾಂಕೇತಿಕವಾಗಿ ಕೊಡುವುದು ಆ ಮೂಲಕ ಜೀವನಕ್ಕೆ ಹತ್ತಿರವಾಗುವುದು. ಇಂತಹ ಸಾಧ್ಯತೆಗಳನ್ನು ಅವುಗಳಿಗೆ ಸಂಬಂಧಪಟ್ಟ ವಿವರಗಳನ್ನು ರಾಮಮೂರ್ತಿಯವರು ತಮ್ಮ ಕಾರಂತರ ಕಾದಂಬರಿಗಳಲ್ಲಿ ನಿಸರ್ಗ, ಮಾನವ ಸಂಬಂಧಗಳು ಎಂಬ ಲೇಖನದಲ್ಲಿ ದೀರ್ಘವಾಗಿ ಚರ್ಚಿಸುತ್ತ ಮರಳಿಮಣ್ಣಿಗೆ ಈ ಸಂದರ್ಭವನ್ನು ಡಿ.ಎಚ್. ಲಾರೆನ್ಸ್‌ನ 'ಸನ್ಸ್ ಅಂಡ್ ಲವರ್ಸ್' ಕಾದಂಬರಿಯ ಕೆಲವು ಸಂದರ್ಭಗಳಿಗೆ ಹೋಲಿಸಿದ್ದಾರೆ''.

ಸಾಮಾನ್ಯವಾಗಿ ಕಾದಂಬರಿಯ ಕೊನೆಯ ಭಾಗದ ಬಗ್ಗೆ ವಿಮರ್ಶಕರು ಎತ್ತಿರುವ ಪ್ರಶ್ನೆಗಳಿಗೆ ಡಾ. ಜಿ.ಸ್. ಅಮೂರರು ಕೊಟ್ಟಿರುವ ಉತ್ತರಗಳು ಸಮಂಜಸವಾಗಿದೆ.

''ಮರಳಿ ಮಣ್ಣಿಗೆ' ಯ ಕೊನೆಯ ಭಾಗದ ಬಗ್ಗೆ ಒಂದು ರೀತಿಯ ಅಸಮಾಧಾನ ಇದುವರೆಗೆ ಬಂದ ಈಕಾದಂಬರಿಯ ವಿಮರ್ಶೆಯ ಒಂದು ಅಸಾಮಾನ್ಯ ಅಂಶವಾಗಿದೆ. ಆದರೆ ನನ್ನ ದೃಷ್ಟಿಯಲ್ಲಿ ಈ ಭಾಗ ಉಳಿದ ಭಾಗಗಳಷ್ಟೇ ಯಶಸ್ವಿಯಾಗಿದೆ. ವೈಚಾರಿಕವಾಗಿಯಂತೂ ಇಲ್ಲಿ ಕಂಡುಬರುವ ಸಾಮಾಜಿಕ ಅವಸ್ಥೆ ಕಾರಂತರ ಜೀವನ ದರ್ಶನದ ಒಂದು ಅವಿಭಾಜ್ಯ ಅಂಗವಾಗಿದೆ. ಸಾಂಪ್ರದಾಯಿಕ ಮೌಲ್ಯಗಳನ್ನು ಕಳೆದುಕೊಂಡ ಬಗೆಯನ್ನು ಈ ಭಾಗ ಬಹು ಮಾರ್ಮಿಕವಾಗಿ ಚಿತ್ರಿಸುತ್ತದೆ. ತುಂಬು

ಎಚ್ಚರದಲ್ಲಿ ತನ್ನ ಜೀವನವನ್ನು ರೂಪಿಸಿಕೊಳ್ಳುವ ನಾಗವೇಣಿ ಅವಳ ಮಡಿಯಾದ ಆತ್ಮ ಸಾಕ್ಷಿಯಲ್ಲಿ ಬೆಳೆದು ಬಂದ ರಾಮು ಈ ಹೊಸ ಸಮಾಜದ ಅತ್ಯಂತ ಯಶಸ್ವೀ ಪ್ರತೀಕಗಳಾಗಿದ್ದಾರೆ.''[೨೬] (ಪು. ೪೫೯)

ಕಾನೂರು ಹೆಗ್ಗಡಿತಿಯಲ್ಲಿ ಬರು ವ ಹೂವಯ್ಯ ಆಧುನಿಕ ವಿದ್ಯಾಭ್ಯಾಸವನ್ನು ಪಡೆದು ರೋಗರುಜಿನಗಳು ಬಂದಾಗ ಯಂತ್ರ, ತಂತ್ರ, ಪ್ರಸಾದಗಳ ಬದಲಿಗೆ ಔಷಧಿಗಳನ್ನು ತೆಗೆದು ಕೊಳ್ಳಬೇಕೆಂದು ಕ್ರೌರ್ಯದಲ್ಲಿ ದಂಡಿಸಿ ಅಧೀನಕ್ಕೆ ಒಳಪಡಿಸುವ ಬದಲು ಪ್ರೀತಿ ಅನುಕಂಪಗಳಲ್ಲಿ ಉಳಿಸಿಕೊಳ್ಳಬೇಕು ಎನ್ನುತ್ತಾನೆ. ಜೀವನ ವಿಧಾನದಲ್ಲಿ ಮೇಲ್ಪದರದ ಬದಲಾವಣೆ ಬಯಸುವವನೇ ಹೊರತು ಜೀವನ ವಿಧಾನದಲ್ಲೇ ಮೂಲಭೂತ ಮಾರ್ಪಾಡುಗಳನ್ನು ಚಿಂತಿಸುವವನಲ್ಲ.

ಹೀಗೆ ಅನ್ಯಸಂಸ್ಕೃತಿಯ ಪ್ರಭಾವ ದೇಸಿಯ ಸಂಸ್ಕೃತಿಯ ಮೇಲೆ ಆಗದಿದ್ದರೂ ದೇಸಿಯ ಸಂಸ್ಕೃತಿ ಅಂತರಂಗದಲ್ಲಿ ತನ್ನದೇ ಆದ ಸಂಘರ್ಷ ಮೂಡಿ ಹೇಗೆ ಅನುಸಂಧಾನಗೊಳ್ಳುತ್ತವೆಂಬುದನ್ನು ತಿಳಿಯಬಹುದು.

ಅದೇ ರೀತಿ 'ದೇಸೀ' ಸಂಸ್ಕೃತಿಯ ಮೇಲೆ ಅನ್ಯ ಸಂಸ್ಕೃತಿಯ ಪ್ರಭಾವ ಅಥವಾ ಆಕ್ರಮಣವುಂಟಾದಾಗ ಹೇಗೆ ಸಂಘರ್ಷಮೂಡಿ ಅನುಸಂಧಾನಗೊಳ್ಳುತ್ತವೆ ಎಂಬುದನ್ನು ಶ್ರೀ, ರವರ ಪದ್ಯವು ನಿರೂಪಿಸುತ್ತದೆ.

ಪಡುವಕಡಲ ಹೊನ್ನಹೆಣ್ಣು,
ನನ್ನ ಜೀವದುಸಿರು, ಕಣ್ಣು,
ನಲಿಸಿ, ಕಲಿಸಿ, ಮನವನೊಲಿಸಿ
ಕುಣಿಸುತಿರುವಳು ;
ಒಮ್ಮೆ ಇವಳು, ಒಮ್ಮೆ ಅವಳು,
ಕುಣಿಸುತಿರುವಳು,
ಹೀಗೆ ನನಗೆ ಹಬ್ಬವಾಗಿ
ಇನಿಯರಿಬ್ಬರನ್ನು ತೂಗಿ,
ಇವಳ ಸೊಬಗನವಳು ತೊಟ್ಟು,
ನೋಡಬಯಸಿದೆ;
ಅವಳ ತೊಡಿಗೆ ಇವಳಿಗಿಟ್ಟು
ಹಾಡಬಯಸಿದೆ. (ಪು-XVI )

## ಅಡಿಟಿಪ್ಪಣಿ

೧. ಟಿ.ಪಿ. ಅಶೋಕ, ಶಿವರಾಮಕಾರಂತ ಎರಡು ಅಧ್ಯಯನಗಳು, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ ಕರ್ನಾಟಕ, ೪ನೇ ಮುದ್ರಣ, ೨೦೦೪, ಪುಟ-೮೨.

೨. ಡಾ. ಶಿವರಾಮ ಕಾರಂತ, ಮರಳಿ ಮಣ್ಣಿಗೆ, ಕಾದಂಬರಿ, ಸಪ್ನ ಬುಕ್‌ಹೌಸ್, ಬೆಂಗಳೂರು, ಮೇ, ೨೦೦೬, ಮರುಮುದ್ರಣ, ಪು-೨.

೩. ಅದೇ ಪುಟ-೨೩

೪. ಅದೇ ಪು-೩

೫. ಕುವೆಂಪು, ಕಾನೂರು ಹೆಗ್ಗಡಿತಿ, ಕಾದಂಬರಿ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೨ನೇ ಮುದ್ರಣ, ೨೦೦೭, ಪು-೧೨.

೬. ರಾವಬಹದ್ದೂರ್, ಗ್ರಾಮಾಯಣ, ಕಾದಂಬರಿ, ಉಷಾಸಾಹಿತ್ಯ ಮಾಲೆ, ಮೈಸೂರು, ೩ನೇ ಮುದ್ರಣ, ೧೯೮೧, ಪು-೧೭-೧೮.

೭. ಮರಳಿ ಮಣ್ಣಿಗೆ, ಪು-೫೮

೮. ಅದೇ ಪು-೧೧೫

೯. ಅದೇ ಪು-೧೨೭

೧೦. ಕಾನೂರು ಹೆಗ್ಗಡಿತಿ, ಕಾದಂಬರಿ, ಪು-೭೪

೧೧. ಮರಳಿ ಮಣ್ಣಿಗೆ, ಪು-೧೩೫

೧೨. ಅದೇ ಪು-೧೩೩

೧೩. ಅದೇ ಪು-೧೩೬

೧೪. ಅದೇ ಪು-೧೪೬

೧೫. ಅದೇ ಪು-೧೪೮

೧೬. ಅದೇ ಪು-೧೫೪

೧೭. ಅದೇ ಪು-೧೬೩

೧೮. ಅದೇ ಪು-೧೭೬

೧೯. ಅದೇ ಪು-೨೦೧

೨೦. ಅದೇ ಪು- ೩೩೨

೨೧. ಅದೇ ಪು-೩೩೨-೩೩೩

೨೨. ಅದೇ ಪು-೩೩೩

೨೩. ಅದೇ ಪು-೩೩೩-೩೩೪

೨೪. ಅದೇ ಪು-೩೩೬

೨೫. ಜಿ.ಎಸ್. ಶಿವರುದ್ರಪ್ಪ. (ಸಂ.) 'ಕಾದಂಬರಿಕಾರರಾಗಿ ಕಾರಂತ', ಬೆಂಗಳೂರು ಕನ್ನಡ ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯ ೧೯೮೩. ಪು-೧೭೨

೨೬. ಕು.ಶಿ. ಹರಿದಾಸಭಟ್ಟ, (ಸಂ.) 'ಕಾರಂತ ಪ್ರಪಂಚ' ಅಭಿನಂದನ ಗ್ರಂಥ, ಗೀತಾಬುಕ್‌ಹೌಸ್, ಮೈಸೂರು. ೧೯೬೯, ಪು-೪೫೫.

೨೭. ಇಂಗ್ಲೀಷ್ ಗೀತೆಗಳು, ಶ್ರೀ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು. ಪು. XVI

# ಅಧ್ಯಾಯ - ೩

## ಹೆಣ್ಣಿನ ಶೋಷಣೆ ಮತ್ತು ಹೋರಾಟ

ಯಾವುದೇ ಒಬ್ಬ ಲೇಖಕನು ಹೆಣ್ಣಿನ ಬಗ್ಗೆ ಚಿತ್ರಿಸಬೇಕಾದರೆ 'ಗಂಡು ಹೆಣ್ಣು' ಸಂಬಂಧವೆಂದೇ ಒಟ್ಟೊಟ್ಟಿಗೆ ವಿಶ್ಲೇಷಿಸುತ್ತಾನೆ. ಏಕೆಂದರೆ ಗಂಡು ಹೆಣ್ಣಿನ ಸಂಬಂಧ ಸಾಮಾಜಿಕವೂ ಹೌದು, ವೈಯಕ್ತಿಕವೂ ಹೌದು. ಇದು ಮನುಷ್ಯನ ಅತ್ಯಂತ ಮೂಲಭೂತವಾದ ಸಂಬಂಧಗಳಲ್ಲಿ ಒಂದು ಹಾಗಾಗಿ ಈ ಸಂಬಂಧಗಳನ್ನು ಕುರಿತು ನಾವು ತೆಗೆದುಕೊಳ್ಳುವ ನಿಲುವುಗಳು ಧರ್ಮ, ಸಂಸ್ಕೃತ, ಸಮಾಜದ ಕುರಿತು ತೆಗೆದುಕೊಳ್ಳುವ ನಿಲುವುಗಳೇ ಆಗಿಬಿಡಬಹುದು. ಗಂಡುಹೆಣ್ಣಿನ ಸಂಬಂಧ ಕೇವಲ ಶಾರೀರಿಕ ವ್ಯಾಪಾರವಾಗದೆ, ಅದೊಂದು ಮಾನಸಿಕ ವ್ಯಾಪಾರವೂ ಹೌದು. ವ್ಯಕ್ತಿಯ ಅಂತರಂಗ ಬಹಿರಂಗಗಳೆರಡೂ ಏಕಕಾಲದಲ್ಲಿ ಹಿಡಿಯಲು ಗಂಡು ಹೆಣ್ಣಿನ ಸಂಬಂಧ ಬಹುಮುಖ್ಯವಾದದು.

ಪುರುಷ ಸಮಾಜವು ನಾಗರಿಕತೆ ಪ್ರಗತಿಯಾದಂತೆಲ್ಲಾ ತನ್ನದೇ ಆದ ಕೆಲವು ವಾದಗಳನ್ನು ಬೆಳೆಸಲಾರಂಭಿಸಿತು. 'ಹೆಣ್ಣು ಮನೆಯ ಕಣ್ಣು' 'ಹೆಣ್ಣೆಂದರೆ ಭೂಮಿತಾಯಿ', ಹೆಣ್ಣೆಂದರೆ ಕುಟುಂಬದ ಕಣ್ಣು' ಪ್ರತಿಯೊಬ್ಬ ಪುರುಷನ ಸಾಧನೆಯ ವ್ಯಕ್ತಿತ್ವದ ಹಿಂದೆ ಹೆಣ್ಣೊಬ್ಬಳಿರುತ್ತಾಳೆ.'ಹೆಣ್ಣನ್ನು ಗೌರವಿಸಬೇಕು. ಪೂಜಿಸಬೇಕು, ಆರಾಧಿಸಬೇಕು'. ಹೀಗೆ ವಿನ್ಯಾಸ ವಿಚಾರಗಳನ್ನು ಕಟ್ಟಿತು. ಇದರೊಂದಿಗೆ ಶಂಕರಚಾರ್ಯರು ಹೇಳುವಂತೆ ಹೆಣ್ಣು ನರಕಕ್ಕೆ ಮೊದಲು ಬಾಗಿಲು' ಬೈಬಲ್ ಹೇಳುವಂತೆ 'ನೀನು ಪಾಪ ತೀರಿಸಲೆಂದೇ ಭೂಮಿಗೆ ಬಂದಿರುವೆ ಅದಕ್ಕೆ ಕಾರಣ ನೀನು ಹೆಣ್ಣಿನ ಹೊಟ್ಟೆಯಲ್ಲಿ ಹುಟ್ಟಿರುವುದು' ಮನು ಹೇಳುವಂತೆ 'ಹೆಣ್ಣಿಗೆ ಸ್ವಾತಂತ್ರ್ಯದ ಅವಶ್ಯಕತೆಯಿಲ್ಲ. ಏಕೆಂದರೆ ಬಾಲ್ಯದಲ್ಲಿ ತಂದೆ ತಾಯಿಯರನ್ನು, ಯೌವನದಲ್ಲಿ ಗಂಡನನ್ನು, ವೃದ್ಧಾಪ್ಯದಲ್ಲಿ ಮಕ್ಕಳನ್ನು ಆಶ್ರಯಿಸಲು ಸ್ತ್ರೀಗೆ ಸ್ವಾತಂತ್ರ್ಯ ಅನಗತ್ಯ'.

ಮಹತ್‌ವ್ಯಕ್ತಿತ್ವವನ್ನು ಹೊಂದಿದ್ದು ಬುದ್ಧ ಮೊದಮೊದಲು ಹೆಣ್ಣಿಗೆ ದೀಕ್ಷೆ ಕೊಡಲಿಲ್ಲ. ಮಹಾನ್ ಶಾಂತಿದಾತನಾದ ಯೇಸು ವಸ್ತುವೊಂದು ಹೆಣ್ಣಿನ ಬಗ್ಗೆ ಏನನ್ನು ಹೇಳಲಿಲ್ಲ. ಇವುಗಳೊಂದಿಗೆ ಪುರುಷ ಪ್ರಧಾನ ಸಮಾಜವು ಮತ್ತೊಂದು ವಾದವನ್ನು

ಮುಂದಿಟ್ಟು ಬೆಳೆಸಲಾರಂಭಿಸಿತು. 'ಬ್ರಹ್ಮಚರ್ಯವೇ ಜೀವನ, ವೀರ್ಯನಾಶವೇ ಮೃತ್ಯು' 'ನೀನು ಆಧ್ಯಾತ್ಮಿಕ ಸಾಧನೆ ಮಾಡಿ ಮುಕ್ತಿ ಪಡೆಯಬೇಕಾದರೆ ಹೆಣ್ಣಿಂದ ದೂರವಿರು'. 'ನಿನ್ನ ಆಯಸ್ಸು ಶಾರೀರಿಕ ದೃಢತೆ ಮತ್ತು ಮಾನಸಿಕವಾಗಿ ಸ್ವಸ್ಥತೆ ಇರಬೇಕಾದರೆ ಹೆಣ್ಣಿನಿಂದ ದೂರವಿರು' ಎನ್ನುವಂತಹ ಮಾತುಗಳು ಪ್ರಸ್ತುತದಲ್ಲೂ ಬೆಳಕಿಗೆ ಬಂದಿರುವುದನ್ನು ಕಾಣಬಹುದು.

ಋಗ್ವೇದದಲ್ಲಿ ಬರುವ ಗಾರ್ಗಿ ಮೈತ್ರೇಯ ಸ್ತ್ರೀಯರು ಪಂಡಿತರಾಗಿದ್ದು ವೇದ ಮಂತ್ರಗಳನ್ನು ರಚಿಸಿ 'ಪುರುಷ' ಎಂಬ ಗುರುವಿಗೆ ಪ್ರಶ್ನೆ ಮಾಡಿದ್ದರಂತೆ. ಇಂತಹವರನ್ನು ಪುರುಷ ಸಮಾಜವನ್ನು ಯಾವಾಗಲೂ ಹೆಣ್ಣಿನ ಸಂಧಿಯಲ್ಲಿಯೇ ಇಟ್ಟಿರುತ್ತದೆ.

ಕಾರಂತರು ಹೆಣ್ಣಿನ ಮಾನವೀಯ ಮೌಲ್ಯಗಳ ದೃಷ್ಟಿಯಲ್ಲೇ ಚಿತ್ರಿಸುತ್ತಾರೆ. ಅವರಿಗೆ ವೈಯಕ್ತಿಕತೆಗಿಂತ ಸಾಮೂಹಿಕತೆಗೆ ಹೆಚ್ಚು ಒತ್ತನ್ನು ಕೊಡುತ್ತಾರೆ. ತಾವೂ ಕಂಡ ಹೆಣ್ಣಿನ ಬದುಕಿನ ತಳಮಳಗಳನ್ನು ವಾಸ್ತವತಾವಾದಿ ನೆಲೆಯಲ್ಲಿ, ಬದುಕಿನ ಅನುಭವದ ಮೂಸೆಯಲ್ಲಿ ಚಿತ್ರಿಸುತ್ತಾರೆ. ''ತಾವು ಚಿತ್ರಿಸುವ ಸನ್ನಿವೇಶ ಕಣ್ಣೆದುರಿಗೆ ನಿಜವಾಗಿ ಕಾಣಿಸಬೇಕು ಎಂಬ ಹಟವುಳ್ಳ ನಿಷ್ಠುರ ವಾಸ್ತವವಾದಿಯಾದ ಕಾರಂತರಿಗೆ ತಾವು ನೋಡದ, ನೋಡಲೂ ಸಾಧ್ಯವಾಗದ ಇತಿಹಾಸದ ಕಾಲವನ್ನು ಕಾದಂಬರಿಯಲ್ಲಿ ಕಟ್ಟಿಕೊಡುವುದು ಇಷ್ಟವಿಲ್ಲದ ವಿಷಯ. ಅಂತೆಯೇ ಅವರಿಗೆ ಇತಿಹಾಸದ ರಾಜಮಹಾರಾಜರ ಚರಿತ್ರೆಗಿಂತ ಮಿಗಿಲಾಗಿ ಚರಿತ್ರೆಯಲ್ಲಿ ದಾಖಲಾಗದ ತಮ್ಮ ಪರಿಸರದ History (ಅವಳ ಕಥನ)ಗಳನ್ನು ದಾಖಲಿಸುವುದು ಮುಖ್ಯವೆನಿಸುತ್ತದೆ.''[೧] (ಪು. ೯೧)

ಕಾರಂತರು ಅಪೂರ್ವ-ಪಶ್ಚಿಮ'ಎಂಬ ಪ್ರವಾಸ ಕಥನದಲ್ಲಿ 'ಹುಚ್ಚು ಮನಸ್ಸಿನ ಹತ್ತು ಮುಖಗಳಲ್ಲಿ'' ತಮಗೆ ಗಮನ ಸೆಳೆದ ಹೆಣ್ಣಿನ ಬಗ್ಗೆ ಹಲವು ವಿಷಯಗಳನ್ನು ಉಲ್ಲೇಖಿಸಿದ್ದಾರೆ. ಮಾಗ್ಡಾ ನಾಚುವನ್ ಎಂಬ ನೃತ್ಯ ಕಲಾವಿದೆಯ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸುತ್ತಾ ''ಕಲಾವಿದನ ಸಿದ್ಧಿ ಬಡತನಗಳೆರಡೂ ಬೆರೆತ ಮಾಗ್ಡಾ ನನ್ನ ಪಾಲಿಗೆ ಎಂದೂ ಹೊಳೆಯಿಂದ ಸಂಕೇತವಾದಳು'' ಎನ್ನುತ್ತಾರೆ.

ಅಷ್ಟೇ ಗೌರವದಿಂದ, ಅಭಿಮಾನದಿಂದ ಇನ್ನಿಬ್ಬರೂ ನೃತ್ಯ ಕಲಾವಿದೆಯರ ಬದುಕಿನ ಬಗ್ಗೆ 'ಬಾಲಪ್ರಪಂಚ'ದಲ್ಲಿ ಇಸಡೋರ ರಾಡಂಕನ್ ಮತ್ತು ಅನ್ನಾ ಪಾಲೋವ್ ಇವರ ಬಗ್ಗೆ - ಇಸಡೋರಾಡಂಕನ್ ಹೇಗೆ ಸಾಂಪ್ರದಾಯಿಕ ವೇಷ ಭೂಷಣಗಳನ್ನು

ತಿರಸ್ಕರಿಸಿ ಒಂದು ಗ್ರೀಸ್‌ನ ನಿಲುವಂಗಿಯಲ್ಲಿ ಕುಣಿದು ದೇಹದ ಬಾಗು ಬಳುಕುಗಳನ್ನು ಪ್ರಧಾನವಾಗಿದೆ. ಪ್ರಧಾನವಾಗಿಸಿ ನೃತ್ಯವನ್ನು ನಿರೂಪಿಸಿದಳು' ಎಂಬುದಾಗಿ ನಿರೂಪಿಸುತ್ತಾರೆ.

ಕಾರಂತರಿಗೆ ಇತಿಹಾಸವು ಮಾನವಶಾಸ್ತ್ರದ ಒಂದು ಭಾಗವಾಗಿಯೇ ಬೆಸೆದುಕೊಂಡಿರುವಂತೆ ಕಾಣುತ್ತದೆ. ''ಗೊಂಡಾರಣ್ಯ''ದಂತಹ ರಾಜಕೀಯ ಕಾದಂಬರಿಯಲ್ಲೂ ಈ ಸೂಕ್ಷ್ಮಗಳನ್ನು ನಾವು ಗುರುತಿಸಬಹುದು. ಬಲಶಾಲಿಗಳು ಬಲಹೀನರನ್ನು ಅಂಕೆಯಲ್ಲಿರಿಸಿಕೊಂಡು ಆಡುವ ಅಟಗಳ, ವಿವಿಧ ಚರ್ಯೆಗಳು ಅವರು ಕುತೂಹಲವನ್ನು ಬಹಳಷ್ಟು ಕೆರಳಿಸುವ ಹೆಣ್ಣು ಗಂಡು ಸೇರಿಯೇ ಆಗುವ ಮನುಕುಲದ ಚರಿತ್ರೆಯಲ್ಲಿ ಕುಟುಂಬ ವ್ಯವಸ್ಥೆ, ಲೈಂಗಿಕ ಸಂಬಂಧ, ಆರ್ಥಿಕ ಬಡತನದ ಹಿನ್ನೆಲೆಯಲ್ಲಿ ಯಜಮಾನ್ಯ ನೆಲೆಯಲ್ಲಿ ಇತ್ಯಾದಿ ವಿಷಯಗಳು ಅವರ ನಿರಂತರ ಅಧ್ಯಯನ ವಿಷಯಗಳಾಗಿವೆ.

ಸಂಸ್ಕೃತಿಯ ತೊಡುಗೆ ತೊಟ್ಟ ಮಾನವ ಪ್ರಾಣಿಯ ಬದುಕಿನಲ್ಲಿ ಹೆಣ್ಣುಗಂಡಿನ ಸಂಬಂಧದ ನಿಜನೆಲೆಯಿರುವುದು ಎಂಬುದನ್ನು ಹರಸುತ್ತಾ ಹೊರಟ ಕಾರಂತರಿಗೆ ಗೋಚರಿಸಿದ ಸತ್ಯಗಳನ್ನು ಮುಚ್ಚುಮರೆಯಿಲ್ಲದೆ ದಾಖಲಿಸುತ್ತಾರೆ.

ಬಹುಮುಖ್ಯವಾಗಿ ಚರ್ಚಿತಗೊಂಡ ವಿಮರ್ಶಕರಿಗೆ ಹೆಚ್ಚು ಆಸಕ್ತಿ ಮೂಡಿಸಿದ ಕಾದಂಬರಿ 'ಮರಳಿ-ಮಣ್ಣಿಗೆ' ಯಲ್ಲಿ ಹೆಣ್ಣಿನ ಶೋಷಣೆ ಮತ್ತು ಹೋರಾಟವನ್ನು ಗಮನಿಸಬಹುದು. 'ಮರಳಿ ಮಣ್ಣಿಗೆ' ಕಾದಂಬರಿಯ ಮೂರನೇ ಮುದ್ರಣದಲ್ಲಿ ಕಾರಂತರು ''ಈ ಬರಹದಲ್ಲಿ ಕಾಣುವ ನಾಯಕಿಯರ ಸೌಜನ್ಯ ವಾತ್ಸಲ್ಯಗಳೆಂದರೆ ನಾನು ನನ್ನ ತಾಯಿಯಲ್ಲಿ ಕಂಡ ಆ ಸದ್ಗುಣಗಳ ತೀರಾ ಸಣ್ಣ ಅಂಶಗಳೆನ್ನಬೇಕು. ಸೈರಣೆಯ ಮೂರ್ತಿಯಾಗಿದ್ದ ಅವಳು ನನ್ನ ಜೀವನಕ್ಕೆ ಒಂದು ಹಿರಿಯ ಆದರ್ಶವಾಗಿದ್ದಳು. ಆ ಗುಂಪು ಸಾವಿರಾರು ಭಾರತೀಯ ತಾಯಂದಿರಲ್ಲಿ ಇರುವುದೆಂದು ಒಲ್ಲೆ. ಆದರೂ ನನಗೆ ನನ್ನ ತಾಯಿ ನನ್ನ ತಾಯಿಯೇ. ಇನ್ನೊಬ್ಬರೂ ಸರಿಗಟ್ಟಿಸಲಾರರು ಎಂದು ತಮ್ಮ ಮಾತೃಭಕ್ತಿಯನ್ನು ತೋರಿಸಿಕೊಂಡಿರುವುದರ ಜೊತೆಗೆ ಕಾದಂಬರಿಯ ನಾಯಕಿಯರಲ್ಲಿ ತಮ್ಮ ತಾಯಿಯಲ್ಲಿ ಕಂಡ ಕೆಲವು ಸದ್ಗುಣಗಳನ್ನು ತುಂಬಿದ್ದಾರೆ.. ಹಾಗೆಯೇ ಮೂರನೇ ತಲೆಮಾರಿನ 'ರಾಮು'ಪಾತ್ರದಲ್ಲಿ ತಮ್ಮನ್ನೇ ತುಂಬಿಕೊಂಡಿದ್ದಾರೆಂದೆನಿಸುತ್ತದೆ.

ಕುವೆಂಪುರವರು ತಮ್ಮ ಕಾದಂಬರಿಗಳಲ್ಲಿ ಫ್ಯೂಡಲ್ ವ್ಯವಸ್ಥೆಯ ಅಧೀನದಲ್ಲೇ ಹೆಣ್ಣಿನ ಸ್ವಾತಂತ್ರ್ಯವನ್ನು ಅವಳ ಬದುಕನ್ನು ಚಿತ್ರಿಸಿದ್ದಾರೆ. ಯಾವೊಂದು ಹೆಣ್ಣು, ಆರ್ಥಿಕತೆಯನ್ನು ಹೊಂದಿರುವ ಯಜಮಾನನನ್ನು ಪ್ರಶ್ನೆ ಮಾಡಲಾರದೆ 'ನಾಯಿಯ ಬಾಲ ಡೊಂಕಿನಂತೆ' ತಲೆಬಾಗಿಸಿ ನಡೆಯುವುದನ್ನು ನೋಡಬಹುದು.

ರಾವಬಹದ್ದೂರರ 'ಗ್ರಾಮಾಯಣ' ಕಾದಂಬರಿಯಲ್ಲಿ ಸ್ತ್ರೀಪಾತ್ರ ಚಿತ್ರಣಗಳು ಪುರುಷನ ಅಧೀನಕ್ಕೆ ಒಳಪಟ್ಟಿದ್ದು ತಮ್ಮ ಸ್ವಾತಂತ್ರ್ಯವನ್ನು ಗಳಿಸಿಕೊಳ್ಳುವಲ್ಲಿ ಅಲ್ಲಿಯು ಸಹ ಪೇಚಾಡುವುದನ್ನು ಗಮನಿಸಬಹುದು. 'ಮರಳಿ-ಮಣ್ಣಿಗೆ' ಯಲ್ಲಿ ಕಂಡುಬರುವ ಸರಸೋತಿ ಗ್ರಾಮಾಯಣದಲ್ಲಿ ಕಂಡು ಬರುವ ಪುತಳೀಬಾಯಿ ಇವೆರಡೂ ಪುರುಷನ ಯಜಮಾನಿಕೆಯ ಎದುರು ಗೊಣಗಲು ಪ್ರಯತ್ನಿಸುತ್ತಾರೆ.

'ಬೆಳಗಿನ ಜಾವಕ್ಕೆ ಅವು ಕೂಗಿದೊಡನೆಯೇ - ಇಬ್ಬರೂ ಎಚ್ಚೆತ್ತು ಮುಸುರೆಯನ್ನು ಹೊರಕ್ಕೆ ಹಾರಿ, ಗಸಗಸನೆ ತಿಕ್ಕುವರು. ಮುಸುರೆ ತಿಕ್ಕಿದ ಬಳಿಕ ಯಾವತ್ತು ಚಂಬು, ಚರಿಗೆ, ಪಂಚಪಾತ್ರಗಳಿಗೆ ಬೂದಿ ಹಾಕಬೇಕು. ಆಮೇಲೆ ಮನೆ ಬಡಗಿ, ನೆಲಗುಡಿಸಿ ಆಯಿತೆಂದರೆ, ಒಂದೆರಡು ಕ್ಷಣ ನಿಟ್ಟುಸರಿಗೆ ಅವಕಾಶವಾಗುತ್ತದೆ. ಅಷ್ಟಕ್ಕೆ 'ನೇಸರು' ಬೀಳುತ್ತದೆ. ಹಟ್ಟಿಯಲ್ಲಿ ಕಟ್ಟಿದ್ದೆ ಒಣಕಲು ದನಗಳು ತಮಗೆ 'ಅಕ್ಕಚ್ಚು' ಬರಲಿ ಎಂದು ರಾಗ ಮೂಡುತ್ತವೆ. ಮುಂಚಿನ ದಿನ ಮಧ್ಯಾಹ್ನ ಹುಲ್ಲು, ತೌಡು ಸೇರಿಸಿ ಮಾಡಿದ ಅಕ್ಕಚ್ಚು ಬಾಯರುಗಳನ್ನು ಅವುಗಳ ಮುಂದಿನ ಮರಿಗೆಗೆ ಸುರಿದು ಅವುಗಳ ಸೇವೆ ಮಾಡಿದರೆ ಅದಕ್ಕೆ ಪ್ರತಿಫಲವಾಗಿ ಕಲೆಯಲು ಹೋದ ಪಾರೋತಿಯ ಚಂಬಿನಲ್ಲಿ ಅರ್ಧ ಸಿದ್ದೆ ಹಾಲನ್ನು ಒಂದು ದಿನ ಇಳುಗಿಯೇ ಇಳುಗುತ್ತದೆ. ಅಷ್ಟಾದರೂ ಹಾಲನ್ನು ಕೊಡುತ್ತದಲ್ಲಾ ಎಂಬ ಮರ್ಯಾದೆ ಆ ದನಕ್ಕಿದೆ. ಅದಿಲ್ಲದೆ ಹೋದರೆ ಮನೆಯ ದೇವರಿಗೆ ನೈವೇದ್ಯಕ್ಕೆ ಹಾಲು ವಜಾ. ದನದ ಹಾಲು ಕರೆದಾಯಿತೋ ಅದನ್ನು ಉಳಿದ ಒಂದೆರಡು ಸೊಟ್ಟಪಟ್ಟಿ ಮುದಿಗೊಡ್ಡುಗಳನ್ನು ಕರುವನ್ನು ಅರಾಲಿಗೆ ಮೇಯಲು ಅಟ್ಟಿದರಾಯಿತು. ಅವು ಹಟ್ಟಿಯನ್ನು ಬಿಟ್ಟು ಬೆನ್ನಿಗೇನೇ ಹಟ್ಟಿಯ ಸಗಣಿಯನ್ನು ಬಾಚಿ, ಗೊಬ್ಬರದಗ ಗುಂಡಿಗೆ ಎಸೆದರೆ ಮನೆಯ ಒಳಗಿನ ರಗಳೆ ಮುಗಿದ ಹಾಗೆ''.[೨] (ಪುಟ.೪-೫)

ಪೌರೋಹಿತ್ಯಕ್ಕೆ ಅಂಟಿಕೊಂಡಂತಹ ರಾಮ ಐತಾಳರು ತಮ್ಮ ಯಜಮಾನಿಕೆಯ ದರ್ಪದಿಂದಲೇ ಕುಟುಂಬವನ್ನು ನಿಭಾಯಿಸುವ ಹಕ್ಕನ್ನು ಹೊಂದಿದ್ದಾನೆ. ಯಾವೊಂದು ಪ್ರಶ್ನೆಗಳು ಅವನಿಗೆ ತಾಕದಂತೆ ನೋಡಿಕೊಳ್ಳುತ್ತಾನೆ. ಅದಕ್ಕಾಗಿಯೇ ಏನೋ ಭತ್ತದ

ಫಲಸಾದ ಮೊತ್ತದಲ್ಲಿ ತನ್ನ ತಂಗಿ ಸರಸೋತಿಗೆ ಲೆಕ್ಕದ ಸತ್ಯವನ್ನು ತಿಳಿಸದೆ ಸುಳ್ಳು ಹೇಳುವುದು.

'ಕಾನೂರು ಹೆಗ್ಗಡಿತಿಯಲ್ಲಿ ಬರುವ ಅಣ್ಣಯ್ಯಗೌಡರು ಮತ್ತು ಕಾನೂರಿನ ಚಂದ್ರೇಗೌಡರು ತಮ್ಮ 'ಆರ್ಥಿಕತೆಯ' ಬಲಿಷ್ಟವೆಂದು ತಿಳಿದು ಯಜಮಾನಿಕೆಗೆ ಅದೊಂದು ಕುರುಹು ಎಂದು ತಿಳಿದುಕೊಂಡು ನಾಲ್ಕು ಮತ್ತು ಮೂರು ಸ್ತ್ರೀಯರನ್ನು ಹೆಂಡತಿಯರನ್ನಾಗಿ ಪಡೆಯುವುದನ್ನು ಕಾಣಬಹುದು.

ಗ್ರಾಮಾಯಣದ ಕಾದಂಬರಯಲ್ಲಿ ಚಿಮಣಾಳು ಪಡೆದಯ್ಯನವರ ಕಾಮದ ಕಣ್ಣಿಗೆ ಬಲಿಯಾಗುವುದನ್ನು ನೋಡಬಹುದು.

ಕಾರಂತರ 'ಕನ್ಯಾಬಲಿ ಕಾದಂಬರಿಯಲ್ಲಿ' ತನ್ನ ಮತ್ತು ಪ್ರಫುಲ್ಲದ ಸಂಬಂಧವನ್ನು 'ಹಾದರ' ವೆಂದು ತಿಳಿದ ಸಮಾಜದ ಮೌಢ್ಯ ಕ್ರೌರ್ಯಗಳಿಗೆ ಬಲಿಯಾಗುವ ಕನ್ಯೆಯು ಮುಂದೆ ಹಾದರವನ್ನೇ ತನ್ನ ವೃತ್ತಿಯನ್ನಾಗಿ ಮಾಡಿಕೊಂಡಾಗ ವೇಶ್ಯಾ ವೃತ್ತಿಯನ್ನು ತನ್ನ ಸಾಂಸ್ಕೃತಿಕ ಚೌಕಟ್ಟಿನಲ್ಲಿ ಒಪ್ಪಿಕೊಂಡಿರುವ ಸಮಾಜದ ಕಣ್ಣಿನಲ್ಲಿ ಈಗ ನಿತ್ಯ ಸುಮಂಗಲೆಯಂತೆ ಇನ್ನು ಅವಳನ್ನು ವೈಧವ್ಯವು ಕಾಡುವಂತೆಯೇ ಇಲ್ಲ. ಪ್ರಫುಲ್ಲ ಮಾಲತಿಯನ್ನು ಮದುವೆಯಾಗದುದಕ್ಕೆ ಕಾರಣ 'ನಿನ್ನನ್ನು ನಾನು ಅಂತಃಕರಣ ಪೂರ್ವಕವಾಗಿ ಪ್ರೀತಿಸುವವನೇ ನಿನ್ನನ್ನು ಅರೆ ಕ್ಷಣ ಆಗಲಿ ನಿಂದಿರಲಾರೆ. ಆದರೆ ಸಮಾಜವನ್ನು ವಿರೋಧಿಸುವ ಚೈತನ್ಯ ನನಗಿಲ್ಲ. ಮುಂದೆ ಪಶ್ಚಾತ್ತಾಪ ವಿರೋಧಿಸುವ ಚೈತನ್ಯವು ನನಗಿಲ್ಲ. ಮುದೆ ಪಶ್ಚಾತ್ತಾಪ ಪಟ್ಟು ಮಾಲತಿಯ ಬಳಿಗೆ ವಾಪಸ್ಸಾಗುವ ಪ್ರಫುಲ್ಲನನ್ನು ಮಾಲತಿಯೇ ತಿರಸ್ಕರಿಸುವ ಕಾರಣ ತಿರುಗಿ ಮಾಲತಿ ಗರತಿಯಾಗಲಾರಳು.

'ಸನ್ಯಾಸಿಯ ಬದುಕು' ಕಾದಂಬರಿಯಲ್ಲಿ ಶಂಕರರಾಯನ ಸನ್ಯಾಸ್ಯತ್ವದ ಹಿಂದೆ ಒಂದು ಕಣ್ಣೀರ್ಗರೆಯುವ ಸಂಸಾರದ ಗೋಳಿನ ಕಥೆಯೇ ಇದೆ. ಸಾಲವನ್ನು ತೀರಿಸಲಾಗದೆ ಓಡಿ ಊರು ಬಿಟ್ಟ ವಂಚನೆಯ ಚರಿತ್ರೆ ಇದೆ. ಜೂಜು, ಸೋಮಾರಿತನ ಪುರುಷ ಸಹಜಮೇಲ್ತನದ ವಿಕಾರಣಗಳ ಪ್ರೇರಣೆಯೇ ಇದೆ. ಸನ್ಯಾಸಿಯಾಗಿ ಕೃಷ್ಣಭಕ್ತನಾಗಿ ಅವನ ಪ್ರೇಮಾರಾಧನೆಯ ಹಿಂದೆ ಪ್ರೇಮ ವಂಚಿತಳಾದ ಆತನ ಹೆಂಡತಿಯ ಶೋಕ ಗೀತೆ ಇವೆ. ಮಕ್ಕಳ ಹಸಿವು ರೋಗರುಜಿನಗಳ ಪರಂಪರೆಯೇ ಇದೆ.

''ಹೊಟ್ಟೆಯಲ್ಲಿ ತುಂಬಿದ ತನ್ನೆಲ್ಲ ಪ್ರೀತಿ ಮಮತೆಗಳನ್ನು ಅವಳು ಯಾರ ಮೇಲೆ ಕಳೆಯಲಿ ? ಐತಾಳರೋ ? ಹಗಲುಮನೆಯಲ್ಲಿರುವುದೇ ಕಡಿಮೆ. ಇದ್ದರೂ ಹೆಂಡತಿಯೊಡನೆ ಪಟ್ಟಾಂಗ ಹೊಡೆಯುವ ಹೆಣ್ಗರುಳೇ ಗಂಡಸು ಹೇಗೆ ಬಿಗುವಂತು ಇರಬೇಕು ಎಂಬುದನ್ನು ಬಲ್ಲರು. ಹಗಲಿನ ದಾಂಪತ್ಯ ಈರೀತಿಯಾದರೆ ರಾತ್ರಿ ಹಗಲೆಲ್ಲ ದುಡಿದ ಆ ಜೀವಕ್ಕೆ ಕರೆಯುವ ಮೊದಲೇ ನಿದ್ರೆ ತುಂಬುತ್ತದೆ. ಆಗಲೂ ಯಜಮಾನರೊಡನೆ ಭಯವಿಲ್ಲದೆ ಮಾತನಾಡುವಂತಿಲ್ಲ. ಅಂತು ಅವರ ಸಾಂಪ್ರದಾಯಿಕ ಸಂಸಾರದಲ್ಲಿ ಆಚಾರ ಕಟ್ಟಲೆ, ರಿವಾಜುಗಳ ಮಿತಿಯಲ್ಲೇ ಮಮತೆಯು ಸರಿಯಬೇಕು.

ಇತ್ತ ತನ್ನಂತೆ ಕೊರಗಿ ಮನೆಯಲ್ಲಿ ಭಾಗಿಯಾಗಿರುವ ಸರಸೋತಿಯೆಂದರೆ ಅವಳಿಗೆ ತುಂಬ ಆದರ. ಸಹನೆ,ಮರ್ಯಾದೆ,ಅವಳ ಮೇಲೆ ಮುದ್ದು,ಪ್ರೀತಿ - ಎಂಬುದು ಹೇಗೆ ಬಂದೀತು ? ಹಾಗೆ ಯಾರನ್ನು ಪ್ರೀತಿಸಳು ? ಎಂದರೆ ಆ ನೈವೇದ್ಯಕ್ಕೆ ತಕ್ಕ ಹಾಲು ಕೊಡುವ ಕಾಲ ಬಣ್ಣದ ದನ ಗೋಪಿಯನ್ನು ಆವರಿಸಿದಷ್ಟು. ಮಾತನಾಡಿದಷ್ಟು ಪಾರೋತಿಗೆ ಸಾಲದು. ಅವಳು ಒಬ್ಬಳೇ ಕುಳಿತು ಗೋಪಿಯನ್ನು ಮಾತನಾಡಿಸುವಾಗ ಕೆಲವು ಸಮಂತು ಐತಾಳರು ಬಂದುದು ಉಂಟು. ಇವಳು ಇಷ್ಟು ಗಟ್ಟಿಯಾರೊಡನೆ ಮಾತನಾಡುವುದು?' ಎಂದು ಚಕಿತರಾಗಿ ಬಂದು ಕೊನೆಗೆ ಹೆಂಡತಿಯ ರೀತಿಯನ್ನು ನೋಡಿ ಇವಳಿಗೆ ಮಾತನಾಡಲು ಜನ ಬೇಕಿಲ್ಲ. ಕರುವೂ ಸಾಕು. ಒಂದು ಗೋಡೆಯೂ ಸಾಕು. ಎಂದುದುಂಟು. ಅದೊಂದು ಪರಿಹಾಸ್ಯವಲ್ಲ ಅವಳ ಬುದ್ಧಿಗೇಡಿತನದ ಮೇಲಿನ ಒಂದು ಅನುತಾಪ'' [೩] (ಪುಟ.೧೨)

''ಪಾರೋತಿಯು ಮುಗ್ಧೆ ಸ್ವಭಾವದವಳಾಗಿದ್ದು ಗಂಡನೆದುರಿಗೆ ನಿಂತು ಮಾತನಾಡುವಂತಹ ಸಾಮರ್ಥ್ಯದವಳಲ್ಲ. ಕಾದಂಬರಿಯ ಉದ್ದಕ್ಕೂ ಅವಳ ಮಾತು ಮತ್ತು ವ್ಯಕ್ತಿತ್ವ ಮೂಲಧ್ವನಿಯಾಗಿದೆ. ಅದಕ್ಕಾಗಿಯೇ ಏನೋ ಅವಳು ತನ್ನ ಮನೋ ಅಭೀಪ್ಸೆಗಳನ್ನು ಸರಸೋತಿಯೊಂದಿಗೆ ಇಲ್ಲವೇ ತಾನು ಸಾಕಿರುವ ಕರುಗಳೊಂದಿಗೆ ಮಾತನಾಡಲು ಬಯಸುತ್ತಾಳೆ. ಸರಸೋತಿಯು ರೇಗಿ ' ನಿನಗೇನು - ಈ ವರ್ಷ ೧೫ ಕಸಸೆ ಭತ್ತ ಹೆಚ್ಚಿಗೆ ಬಂದಿದೆ ಎಂಬ ಸೊಕ್ಕು. ಅವರ ತೋಟ ಹೋದರೆ ಅಕ್ಕಟ ಬಂದದ್ದು ಅನ್ನುತ್ತೀ, ನಿನ್ನದೇ ತೋಟದಿಂದ ೧೦ವರ್ಷದ ಕೆಳಗೆ ಹೋಯಿತಲ್ಲಾ ಮರ ಸಹಿತ ಅದು ಅಕ್ಕಟೆ ಬಂದದ್ದು ನಿಜ. ಯಾರಾರ ಮನೆ ದಕ್ಷಿಣೆ ಹಿಡಿದು....? ಎಂದು ಹಳಿದು ಹೊರಟೇ ಹೋದಳು.

ಐತಾಳರಿಗೆ ತಂಗಿಯಿಂದ ಬಂದ ಈ ಪ್ರಹಾರ ಬಲವಾಗಿ ನಾಟಿತು. ಆದರೆ ಉತ್ತರ ಕೊಡಲು ಬಾಯಿ ಬಾರದು. ಮನಸ್ಸು ತಂಗಿಯ ಮಾತನ್ನು ನೆನೆದಂತೆ ನೊಂದುಕೊಂಡಿತು''.[೪] (ಪು.೩೦)

ಸರಸೋತಿಯ ಮಾತಿನಲ್ಲಿ ರಾಮ ಐತಾಳರ ಸೊಕ್ಕನ್ನು ಮುರಿಯುವ ಬಿಂಕ ನುಡಿಯನ್ನು ಕಾಣಬಹುದು. ಇದೊಂದು ಹೆಣ್ಣಿನ ಶೋಷಣೆಯ ಪ್ರತಿಭಟನೆಯನ್ನು ಸಹ ತಿಳಿಸುತ್ತದೆ.

''ಗೆಣಸು ಬಂದ ಮೇಲೆ ಹಪ್ಪಳವಾಗಬೇಕು ಹಾಗೆಯೇ ಉದ್ದು,ಅವಡೆಗಳನ್ನು ಬೀಸಿ ಹಪ್ಪಳ ಮಾಡಬೇಕು. ಅತ್ತಲಿಂದ ಬಂದ ಕುಂಬಳಕಾಯಿಗಳಿಗೆ ಒಂದು ಗತಿಗಾಣಿಸಬೇಕು. ಅವನ್ನು ಉದ್ದಿನೊಂದಿಗೆ ಸೇರಿಸಿ ಸಂಡಿಗೆ ಮಾಡಬೇಕು. ಅಗೇಡಿ ಕೆಲಸ ತೊಡಗುವುದರಲ್ಲಿಯೇ ಉಪ್ಪಿನಕಾಯಿಗೂ ಒಂದು ವಾಲೆ ಮಾಡಿಕೊಂಡರೆ ಅನುಕೂಲ. ಈ ಯಾವತ್ತು ವ್ಯಾಪಾರಗಳು ಸ್ತ್ರೀ ಸಾಮ್ರಾಜ್ಯದ ವಹಿವಾಟುಗಳು''[೫] (ಪು. ೪೦)

ಮನೆತನದ ದೈನಂದಿನ ಚಟುವಟಿಕೆಗಳನ್ನು ಹೇಗೆ ಸ್ತ್ರೀ ಸಮಾಜವು ಹೊತ್ತಿದೆ ಎಂಬುದನ್ನು ಮೇಲಿನ ಸಂದರ್ಭವು ತಿಳಿಸುತ್ತದೆ.

'ಪ್ರತ್ಯುತ್ತರ ತುಸು ಬಿಗುವಿನಿಂದಲೇ ಬಂದಿತು. ಸರಸೋತಿಯ ಜಾಡನ್ನು ಕಚ್ಚಿ,ದುಃಖ,ಉದ್ವೇಗಗಳಿಂದ ಪಾರೋತಿ ನೀನು ಸುಮ್ಮನಿರು. ನಿನಗೆ ಅವನ ಹೆದರಿಕೆ ಸಮ. ನನಗೆ ಯಾರ ಹಂಗೂ ಇಲ್ಲ,ಅಪ್ಪಯ್ಯ ನನ್ನನ್ನು ಧಾರೆ ಎರೆದ ಗಳಿಗೆಗೇನೆ ನನಗೆ ಈ ಮನೆಯ ಋಣ ಕಡಿದಿತ್ತು. ಅಣ್ಣ ಎಂದು ನಂಬಿ ನಾನು ಇಲ್ಲಿಗೆ ಬಂದೆ. ಅವನ ಕೂಳಿಗಾಗಿ ಬಂದು ಬೀಳಲಿಲ್ಲ. ನನ್ನ ಅಶನಾರ್ಥ ನನ್ನ ಕೂಳಿಗೆ ಸಾಕು. ನನ್ನ ದೇವರು ಹೋದಮೇಲೆ ಯಾವ ಈ ವರೆಗೆ ಇಲ್ಲಿ ನೀನಿರಬೇಡ' ಅಂದವರಲ್ಲಿ ನನಗೆ ಕೊಡಬೇಕಾದ ಅಕ್ಕಿಯನ್ನು ನಾನು ಕೇಳಿಯೇ ಇಲ್ಲ. ಅವರು ಕೊಡುತ್ತಲೇ ಇಲ್ಲ. ನನಗೇ ....ಅಣ್ಣನ ಮನೆಗೆ ಬಂದೆ- 'ಮಕ್ಕಳು ಇಲ್ಲ' ಮರಿಯಿಲ್ಲ' ಬರಿದೆ ಯಾಕೆ ಅಲ್ಲೇ ಬಿದ್ದಿರುವುದು ? ಇವನೆಷ್ಟಾದರೂ ಅಣ್ಣ. ಒಂದೇ ಕರುಳಿನ ಚೂರು ಎಂದು ನಂಬಿಕೊಂಡು ಬಂದರೆ ಅವನಿಗದೆ ನಾನು ತಾತ್ಸಾರವಾದ ಮನೆ ನಾಯಿ ಹಾಗೆ ದುಡಿಯಬೇಕು. ನಾವು ಚಪ್ಪರ ಯಾಕೆ ಎಂದು ಕೇಳಬೇಕಾದರೆ ಯಾರಾದರೂ ಒಕ್ಕಲು ಮನೆಗೋ ನೆರೆಮನೆಗೋ ಹೋಗಿ ಕೀಳಬೇಕು. ಅಲ್ಲವೇ . ಇಷ್ಟೊಂದು ಮಾತುಗಳು ಅವಳ ಬಾಯಿಂದ ಸೂರಲು ನೀರಂತೆ ಧಾರೆಯಾಗಿ

ಹರಿದವು. ಅವಳನ್ನು ತಡೆದು ಮಾತನಾಡಿಸುವ ಧೈರ್ಯ ಪಾರೋತಿಗೂ ಬರಲಿಲ್ಲ. ಆಗ ಸರಸೋತಿಯು ರಪರಪಕೈಬೀಸಿಕೊಂಡು ಹೊರಟಳು. ಬಾಯಿ ಬಾರದೆ ಇವಳೂ ಬೆನ್ನು ಹಿಡಿದಳು. ನೋಡುವವರ ಕಣ್ಣಿಗೆ ಇಬ್ಬರೂ ಸೌತೆಯ ಹಿತ್ತಲಿಗೆ ನೀರು ಮೊಗೆಯುವುದಕ್ಕೆ ಹೊರಟ ಹಾಗೆ ಕಾಣುತ್ತಿತ್ತು.''

''ಸರಸೋತಿಯು ಹಿಂತಿರುಗದೆ'ನನ್ನ ಕುಲಗೋತ್ರ ಬೇರೆ. ಆ ಹಿತ್ತಲಿನ ಯಜಮಾನನ ಕುಲಗೋತ್ರವೇ ಬೇರೆ. ಅವನಲ್ಲಿ ನೀರಿನ ಋಣ ಇದ್ದಷ್ಟು ದಿನ ಇದ್ದೆ ಈಗ ಹೊರಟ' ಎಂದು ಸಾಗಿದಳು.''[೬] (ಪು-೫೩).

ಮೇಲಿನ ಸಂದರ್ಭದಲ್ಲಿ ಸರಸೋತಿಯ ಪತಿ ಮತ್ತು ಸಹೋದರತ್ವ ಸಂಬಂಧದ ನೋವು ನುಡಿಗಳು ಸರಸೋತಿಯಲ್ಲಿ ವ್ಯಕ್ತವಾಗುತ್ತವೆ. ಮತ್ತು ಪರೋಕ್ಷವಾದ ಅಣ್ಣನ ತಾತ್ಸಾರದ ಬಗ್ಗೆ ಅವಳ ಪ್ರತಿಭಟನೆಯ ಸಹ ಇಲ್ಲಿ ಇದೆ.

ಆದರೆ ಗ್ರಾಮಾಯಣ ಕಾದಂಬರಿಯಲ್ಲಿ ಇದಕ್ಕೆ ವೈರುಧ್ಯವಾಗಿದೆ. ಸ್ವಾಮೀಜಿಯಿಂದ ಚಮಣಾಳ ಅತ್ಯಾಚಾರವಾಗುವುದನ್ನು ಕಂಡು ಪುತಳೀಬಾಯಿ 'ಸ್ವಾಮಿಗಳಿಗೆ ಚಮಣಾಳ ಮೇಲೆ ಬಲತ್ಕಾರ ನಡೆಸಿದ್ದಕ್ಕಾಗಿ ಸ್ವಾಮಿಗಳಿಗೆ ಚೆನ್ನಾಗಿ ಶಾಸನ ಮಾಡಬೇಕು' ಎಂದು ಬಾಬು ಸಾಹೇಬನ ಸ್ವಾಮೀಜಿಯ ಪರವಾದ ಒಕ್ಕಲು ನುಡಿ ಮತ್ತು ದಾದಾನ ಹೆಸರು ಕೇಳಿದೊಡನೆ ಚಮಣಾಳಿಗೆ ಆಗಿರುವ ಅನ್ಯಾಯವನ್ನು ಪ್ರತಿಭಟಿಸದೆ ತನ್ನ ಮರ್ಯಾದೆ ಮತ್ತು ಪ್ರತಿಷ್ಠೆ ಎಲ್ಲಿ ಆಳುಗೇಡುವುದೋ ಎಂದು ತಿಳಿದು ಚಮಣಾಳನ್ನೇ ಅತ್ಯಾಚಾರದ ರಹಸ್ಯವನ್ನು ಬಯಲು ಮಾಡದಂತೆ ಪ್ರಯತ್ನಿಸುತ್ತಾಳೆ.

ಮೇಲ್ನೋಟಕ್ಕೆ ಒಂದು ಹೆಣ್ಣು ಇನ್ನೊಂದು ಹೆಣ್ಣಿನ ಶೋಷಣೆ ಮಾಡುತ್ತಿದ್ದಾಳೆನಿಸಿದರೂ ಗೊತ್ತಾಗದ ರೀತಿಯಲ್ಲಿ ಪುರುಷನ ಯಜಮಾನಿಕೆ ಕೈಗಳು ಇರುವುದನ್ನು ನಾವು ಕಾಣಬಹುದು.

'ಬೆಟ್ಟದ ಜೀವ' ಕಾದಂಬರಿಯಲ್ಲಿ ಕಂಡುಬರುವ ಶಂಕರ ಅರಕೆ ಕೊರಗುಗಳ ಮಧ್ಯೆಯು ಸಾಹಸಿಯಾದ ಹಾಗೂ ಸರಸಿಯಾದ ಗಂಡನ ಜೊತೆಗೆ ಕೊಂಚ ಬದುಕಿಗೆ ತನ್ನನ್ನು ಒಗ್ಗಿಸಿಕೊಂಡು ಸನ್ನಿವೇಶಗಳಿಗೆ ಹೊಂದಿಕೊಂಡು ಹೋಗುವಲ್ಲಿ ಪ್ರಕಟವಾಗುವ ಅವಳ ಹೊಂದಾಣಿಕೆಯ ಗುಣ ಬದುಕಿನ ಸಾಮರಸ್ಯವನ್ನು ತಿಳಿಸುತ್ತವೆ. ಹಾಗೆಯೇ 'ಕುಡಿಯರ ಕೂಸು' ಕಾದಂಬರಿಯಲ್ಲಿನ ಕೆಂಪ ಮತ್ತು ಒಡಹುಟ್ಟಿದವರು

ಕಾದಂಬರಿಯಲ್ಲಿನ ಇಂಗ್ಲೇಂಡಿನಿಂದ ಬಂದ ಸುಧಾಕರ ವಾಸಂತಿಯ ಪ್ರಶ್ನೆಯೊಂದಕ್ಕೆ ಉತ್ತರಿಸುತ್ತಾ 'ಗಂಡು ಹೆಣ್ಣುಗಳ' ಜೀವನದ ಸಮಸ್ಯೆಗಳು ಅಲ್ಲಿ ಬೇರೆ ಬೇರೆಯದೆಂದು ನನಗೆ ಕಾಣಿಸುವುದಿಲ್ಲ. ಅಲ್ಲಿ ವಿವಾಹ ವಿಚ್ಛೇಧಗಳು ಹೆಚ್ಚಾಗಿವೆ ಎಂಬುದರಿಂದಲೇ ನಾವು ಏನನ್ನೋ ನಿರ್ಧರಿಸಲು ಬರುವಂತಿಲ್ಲ. ಗಂಡ, ಹೆಂಡಿರು ಜೊತೆಯಲ್ಲಿದ್ದಾರೆ ಎಂಬುದರಿಂದಲೇ ಅವರ ಬದುಕು ಚೆನ್ನಾಗಿದೆ ಎಂದು ತೀರ್ಮಾನಿಸಲು ಬರುತ್ತದೆಯೇ?''

'ಮರಳಿ ಮಣ್ಣಿಗೆ' ಕಾದಂಬರಿಯ ರಾಮ ಐತಾಳರು ನಮಗೆ ಪಿಂಡ ಬೇಯಿಸಲು ಸದ್ಗತಿ ಬರಲು ಮಗು ಬೇಕೆಂದು ತಿಳಿದು ತನ್ನ ಹೆಂಡತಿ ಮತ್ತು ತಂಗಿಗೂ ಹೇಳದೆ ಚಪ್ಪರವನ್ನು ಅಣಿಮಾಡದೆ ಮೇಲೆ ಹೇಳುತ್ತಾನೆ. ರಾಮ ಐತಾಳರು ಚಲಾಯಿಸುವ ಹಕ್ಕನ್ನು ಈ ಕೆಳಗಿನ ಸಂದರ್ಭದಲ್ಲಿ ನೋಡಬಹುದು.

''ಶೀನ,ನಮ್ಮ ಮನೆಯ ಪಂಚಾಯತಿಕೆ ನಿನಗೆ ಗೊತ್ತಿಲ್ಲ. ನಮ್ಮಲ್ಲಿ ಒಬ್ಬ ಯಜಮಾನ ಎಂದರೆ ಒಬ್ಬನೇ ಯಜಮಾನ. ಗಂಡನು ಒಂದು ಹೇಳುವುದು ಹೆಂಡತಿ ಇನ್ನೊಂದು ಅಂಬುವುದೇ ಈವರೆಗೆ ನಡೆದಿದ್ದಲ್ಲ. ನಮ್ಮ ಪಡುಕೆರೆಯ ಪರಮನ ಮನೆಯವರ ಹಾಗೆ ಗಂಡ-ಹೆಂಡಿರು ಹಗಲೆಲ್ಲ ಕಚ್ಚಾಡಿ ಊರಿಗೆಲ್ಲ ಡಂಗುರ ಸಾರುವ ಪಂಚಾತಿಕೆ ನಮ್ಮಲ್ಲಿ ಇಲ್ಲವೇ ಇಲ್ಲ. ಆ ಒಂದು ವಿಷಯದಲ್ಲಿ ನಮ್ಮ ಪಾರೋತಿ ತಾಜಾ ಸೀತಾದೇವಿ ನೋಡಿ ಏನೋ ದೇವರು ಅವಳ ಹಣೆಯಲ್ಲಿ ಮೇಲೆ ಸಂತಾನದ ಯೋಗ ಬರೆಯಲಿಲ್ಲ. ಎಂಬುದೊಂದೇ ಕೊರತೆ ಅಲ್ಲದೇ......ಅಲ್ಲವಾದರೆ, ನಿನಗೇನು ಕಡಿಮೆ ಇದೆ ಹೇಳು, ನಾಳೆ ನೀನೇ ನೋಡುವಿ ಹೆಣ್ಣು ಮನೆಗೆ ಬಂದ, ಮೇಲೆ ಹೊಟ್ಟೆಯ ಮಗಳನ್ನು ಕಂಡ ಹಾಗೆ ಕಾಣುವುದನ್ನು'' [೭] (ಪು.೫೮)

''ಸತ್ಯಭಾಮೆಯು ಎರಡು ಮಕ್ಕಳ ತಾಯಾಗಿ ಇಬ್ಬರಿಂದಲೂ ದೂರವಿದ್ದು ಮನೆಯ ಕೆಲಸಗಳಲ್ಲಿ ನುಗ್ಗಾಗುತ್ತಿದ್ದಾಳೆ. ಐತಾಳರಿಗೂ ವಯಸ್ಸಾಯಿತು. ಪಾರೋತಿಯು ತುಂಬಾ ದಣಿದಳು. ಸರಸೋತಿಗೆ ಪ್ರಯಾಸಾದರೂ ಅವಳ ಚುರುಕುತನ ಕಡಿಮೆಯಾಗಿಲ್ಲ. ಮನೆಯೊಳಗೆ ಅವರವರು ಅವರವರಿಗೆ ಕೂಡಿದ ಕೆಲಸ ಮಾಡುತ್ತಲೇ ಇರುತ್ತಾರೆ. ಆದರೂ ಎಳೆಯವಳಾದ ಸತ್ಯಭಾಮೆಯ ಮೇಲೆ ಉರಿಯ ಕೆಲಸಗಳೇ ಸಾಕಷ್ಟು ಹೊರೆಯಾಗಿವೆ. ಅಯ್ಯಪ್ಪ! ಎಂದಿಗೆ ಮುಗಿಯುತ್ತದೋ ಈ ಸಂಸಾರ!' ಎಂದೂ ಅವಳು ಅನ್ನತೊಡಗಿದ್ದಾಳೆ''[೮] (ಪು. ೧೬೫)

ಸಮಾಜದಲ್ಲಿ ಗಂಡು ಹೆಣ್ಣುಗಳು ತಮ ತಮ್ಮ ಆವರಣದಲ್ಲಿ ಯೇ ಜೀವಿಸಬೇಕು. ಮೀರಿದ್ದಲ್ಲಿ ಖಂಡನೆಗೆ ಗುರಿಯಾಗುತ್ತಾರೆ. ಇಂತಲ್ಲಿ ಸಾಮಾನ್ಯವಾಗಿ ನಮ್ಮ ತರುಣ ತರುಣಿಯರಲ್ಲಿ ಸರಳವಾದ ಸ್ನೇಹ ಪಂಚಯಗಳಿಗೆ ಅವಕಾಶವಿಲ್ಲವೆಂದು ಗೊತ್ತೇ ಇದೆ ಎಂದು ಗುರುತಿಸಿಕೊಳ್ಳುವ ಕಾರಂತರು ಮಾನಸಿಕ ಮೋಹ ಗಂಡು ಹೆಣ್ಣುಗಳನ್ನು ಶಾಸ್ತ್ರದ ಹಗ್ಗದಿಂದ ಬಿಗಿದರೆ ಉಳಿಯುತ್ತವೆ. ಎಂದು ತಿಳಿಯುವುದು ಅಂಥತೆ ಎಂಬ ಎಚ್ಚರಿಕೆಯನ್ನು ಕೊಡುತ್ತಾರೆ.

''ಸರಸೋತಿಯು ನಿನ್ನ ಗಂಡ ಹೋಗಿ ಅವಳನ್ನು ಕರೆತರಬಹುದಲ್ಲ. ಎಂದಳೂ ಅವಳು ಲಚ್ಚನಿಗೆ ಹಾಗೆ ಹೇಳಿದಳು. 'ನಿಮ್ಮ ತಂಗಿಯನ್ನು ನಾನೂ ನೋಡಬೇಡವೇ ?' ಎಂದಳು'. ಅವಳಿಗೂ ನಿನ್ನಂತೆಯೇ ಎರಡು ಕಣ್ಣು. ಎರಡು ಕಾಲು ಎಂದು ಲಚ್ಚನ ಉತ್ತರ ಬಂದಿತು.''[೯] (ಪುಟ ೧೯೭)

ಲಚ್ಚನಿಗೆ ಹೆಂಡತಿಯ ಮೇಲೆ ಪ್ರೀತಿಯಿದೆ. ಆದರೆ ತನ್ನ ಒಡಹುಟ್ಟಿದ ತಂಗಿಯ ಮೇಲೆ ಏಕೆ ಪ್ರೀತಿಯಿಲ್ಲ ? ಎಂಬ ಪ್ರಶ್ನೆ ಕಾಡುತ್ತದೆ.

''ನಿಮ್ಮ ಸೊಸೆಯು ಇಲ್ಲಿಂದ ಹೊರಡುವಾಗ ಗರ್ಭಿಣಿಯೆಂಬ ಅನುಮಾನ ಮೂಡಿತ್ತು. ಎಲ್ಲರಿಗೂ ಅದರಿಂದ ಸಂತೋಷವಾಯಿತು. ಆದರೆ ಮಂಗಳೂರಿಗೆ ಹೋದ ಒಂದೆರಡು ತಿಂಗಳಲ್ಲಿ ಅವಳಿಗೆ ಎಲ್ಲಿಲ್ಲದ ಬೇನೆ ಬರತೊಡಗಿತು. ಅದರಿಂದ ಗರ್ಭ ಹೋಯಿತು.ಆದರೆ ಅವಳ ಜೀವ ಇನ್ನೂ ಹುಷಾರಾಗಿರಲಿಲ್ಲ. ಕೊನೆಗೆ ಡಾಕ್ಟರರಿಗೆ ಅವಳನ್ನು ತೋರಿಸಬೇಕಾಯಿತು. ನಿಮ್ಮ ಮಗನು ಸಂಪಾದಿಸಿದ ರೋಗಗಳ ಫಲವಾಗಿ ಆ ಪಾಪದ ಹುಡುಗಿ ಆಯುಷ್ಯವೆಲ್ಲ ನರಳುವಂತಾಗಿದೆಯಂತೆ''[೧೦] (ಪು-೨೦೨)

ಲಚ್ಚನಿಗೆ ತನ್ನ ನಲ್ಮೆಯ ಹೆಂಡತಿ ಎಂಬುದರ ಬಗ್ಗೆ ಕಾಳಜಿ ಇದ್ದಿದ್ದರೆ ಅವಳೊಂದಿಗೆ ದೈಹಿಕ ಸಂಬಂಧವನ್ನು ಇಟ್ಟುಕೊಳ್ಳದೇ ತನಗಿರುವ ಕಾಯಿಲೆಯನ್ನು ಹೇಳಿಕೊಳ್ಳಬೇಕಾಗಿತ್ತು. ಆದರೆ ಬೇರೊಬ್ಬರೊಂದಿಗೂ ಹೇಳಿಕೊಳ್ಳುವಂತಹ ತನ್ನ ಮನೋವ್ಯಾಕುಲತೆಯನ್ನು ಜಾಡ್ಯವನ್ನು ಏತಕ್ಕಾಗಿ ಏನೂ ತಿಳಿಯದಂತಹ ಮುಗ್ಧ ನಾಗವೇಣಿಯ ಮೇಲೆ ಪ್ರಯೋಗಿಸಿದನು. ತನ್ನನ್ನು ತಾನೂ ಅರ್ಥಮಾಡಿಕೊಳ್ಳುವ ಲಚ್ಚ ಹೆಣ್ಣನ್ನು ಶೋಷಿಸುವ ಬಗೆ ಹೇಗೆಂದು ಮೇಲಿನ ಸಂದರ್ಭ ತಿಳಿಸುತ್ತದೆ.

''ನನಗೆ ಇಲ್ಲದ ಬೇನೆ ತೊಡಗಿದೆ. ಸಂಕಟದಿಂದ ನರಳುವಂತಾಗಿದೆ ಎಂದಿತ್ತು. ಇನ್ನೊಂದರಲ್ಲಿ 'ನನ್ನತಾಯಾಗುವ ಯೋಗದ ತಪ್ಪಿ ನಾನೇ ರೋಗದ ನಾಯಾಗಿದ್ದೇನೆ ಎಂಬ ಉಲ್ಲೇಖವಿತ್ತು. ಮುಂದೆ ವೈದ್ಯರ ಶಾಸನ ವಾಸುದೇವಯ್ಯನು ಪಟ್ಟಂತಹ ಕೊರಗು ಹೇಳಿ ಮುಗಿಯದು ಅವರು ತಮ್ಮ ಮಗಳನ್ನು ಅಳಿಯನಿಂದ ಅಂಜಿ ದೂರ ಇರಿಸಿದರು. ಅವರೇ ಅಳಿಯನಿಗೇನೋ ನಾಲ್ಕು ತಿಂಗಳ ಕಾಲ ಹಣ ಕಳುಹಿಸಿದರು ಕೊನೆಗೆ ಅವನೇ 'ನಿಮ್ಮ ಋಣ ನನಗೆ ಬೇಡ' ಎಂದು ಸಿಟ್ಟಾಗಿ ಕಾಗದ ಬರೆದನು. ಮನೆಯ ವಾರ್ತೆಯನ್ನು ತಿಳಿದ ಬಾವ ಸದಾಶಿವನು ಅವನನ್ನು ಚೆನ್ನಾಗಿ ಹೇಳಿದುದರ ಫಲವಾಗಿ ಎಲ್ಲಾರೊಡನೆಯೂ ಲಚ್ಚನ ವೈರ ಬೆಳೆಯಿತು. ಕೊನೆಕೊನೆಗೆ ನಾಗವೇಣಿಯು ಅವನನ್ನು ಕುಳಿತು ನನ್ನ ಬಾಳ್ವೆ ಕೆಡಿಸಲು ಬಂದ ಪ್ರಾಣಿ ಎಂದು ತಿಳಿಯುವಂತಾಯಿತು''. [೧೧](ಪು-೨೦೩)

ನಾಗವೇಣಿಯ ಬಾಳು ಚಿಂತಾಕ್ರಾಂತವಾಯಿತು. ತನ್ನ ಜೀವನದುದ್ದಕ್ಕೂ ಕಲ್ಲು ಮುಳ್ಳುಗಳಹಾದಿಯೇ ಅವಳ ಪಾಲಗಾಯಿತು. ತನ್ನ ದುಃಖದ ಬೇನೆಯನ್ನು ತೋಡಿಕೊಂಡರೂ ಯಾವುದಕ್ಕೂ ಪ್ರತಿಕ್ರಿಯಿಸದೆ ಇರುವಂತಹ ಲಚ್ಚ ನಾಗವೇಣಿಗೆ ತಕ್ಕ ಗಂಡನೇ? ಎಂಬುದನ್ನು ಯೋಚಿಸಬೇಕಾಗುತ್ತದೆ.

''ದಾನವ್ವ ಸ್ವಾಮಿಗಳ ಅನಧೀಕೃತ ಅವಿವಾಹಿತ ಪತ್ನಿಯಾಗಿದ್ದವಳು ಮುಳ್ಳಿನಿಂದ ಮುಳ್ಳನ್ನು ತೆಗೆಯುವಂತೆ ಪಾಪದಿಂದಲೇ ಪಾಪಕೃತ್ಯವನ್ನು ಬಯಲಿಗೆಳೆಯಬೇಕಾಗುತ್ತದೆ. ದಾನವ್ವನ ಮಾತನ್ನು ಜನರು ನಂಬಿದರು. ಚಿಮಣಾಳ ಕೌಮಾರ್ಯ ಭಂಗವನ್ನು ಸ್ವಾಮಿಗಳು ಮಾಡಿದ್ದು ನಿಜವೆಂದರು. ಆದರೆ ಮಠದ ಒಬ್ಬ ಸನ್ಯಾಸಿಗೆ ಚಿಮಣಿಗಳನ್ನು ಗಂಟು ಹಾಕಿ ಮಠ ದಂಡ ಪವಿತ್ರ ಸ್ಥಾನದದಲ್ಲಿ ಗೃಹಸ್ಥಾಶ್ರಮ ಸ್ಥಾಪಿಸುವುದು ಅವರ ಮನಸ್ಸಿಗೆ ಬರಲಿಲ್ಲ.''[೧೨] (ಪು-೬೭)

ದಾನವ್ವನ ಚಿತ್ತದಲ್ಲಿ ಚಿಮಣಾಳಗಾದ ಅನ್ಯಾಯವನ್ನು ಪರೋಕ್ಷವಾಗಿ ಪ್ರತಿಭಟಿಸುವ ತಂತ್ರವಿದೆ. ಈ ತಂತ್ರದ ಮೂಲಕವೇ ಅವಳು ಪವಿತ್ರ ಸ್ವಾಮಿ ಎನಿಸಿಕೊಂಡ ಪಡದಪ್ಪನ ಬಂಡವಾಳವನ್ನು ಬಯಲಿಗೆಳೆಯಲು ಪ್ರಯತ್ನಿಸಿದಳು.

''ಯಾರ ಹೆಸರ ಹೇಳಿ ಏನ ಮಾಡೂದೈತಿ ರತ್ನಕ್ಕಾ ? ಕಾಕಾನ ಜೀವಾ ಹಿಂಡಿ ಮಾನಾ ಕಳಕೊಂಡು ಯಾಮಾರಿ ಕಟಿಗೊಂಡು ಬದುಕೇ ? ಎಣ್ಣಾ ಮಾಡಿದ್ದಾರೆ ನಾನ ನನ್ನ ಉಳಿಸಬ್ಯಾಡ ಎಣ್ಣಾ' ಚಿಮಣಾಳಲ್ಲಿ ಈಗ ಎಲ್ಲಿಲ್ಲದ ಧೈರ್ಯ ಬಂದಿತ್ತು. ಸಾವನ್ನಪ್ಪಿ ಜಗತ್ತಿನ ದುಃಖಗಳಿಂದ ಒಮ್ಮೆ ಮುಕ್ತಳಾಗುವ ಆಸೆ ಈ ಮಾತನ್ನಾಡಿಸಿತ್ತು.'

''ಲಗ್ನ ಆಗೋ ಜಾತಿಗೆ ಅಂವಾ ಸೇರಿಲ್ಲ ಎಣ್ಣಾ ಅಂವಾ ಒಬ್ಬದೇಶ ನಿಕಾಳೆ ಸನ್ಯಾಸಿ'' [೧೩] ಚಿಮಣಾ ಉಸಿರು ಬಿಗಿ ಹಿಡಿದು ನಿರ್ವಾಹವಿಲ್ಲದೆ ಹೆದರಿ ಹೇಳಿದಳು. (ಪು. ೬೪)

ಚಿಮಣಾಳ ಬಗ್ಗೆ ಜನ ಸಾಮಾನ್ಯರು ಮಾತನಾಡುವ ಕೊಳಕು ನುಡಿಯನ್ನು ಇಲ್ಲಿ ಕಾಣಬಹುದು.

''ಕತ್ತಲದಾಗ ಕಳುಮೆ ಮಾಡಾವ ಸಾಕ್ಷಿಪುರಾವೆ ಇಟ್ಟು ಮಾಡತಾನೇನ್ರಿ ಕುಲ ಕಣ್ಯಾರ' ರಾಜರೋಸ ನಡಿಯೋದದ ಇದಾಗಿದ್ದರ ಇಲ್ಲಿಗ್ಯಾಕೆ ಬರುತ್ತಿತ್ತು ಪರಸಂಗ ? ಚಿಮಣಾ ನಿಮ್ಮಿಬ್ಬರನ್ನು ಬಿಟ್ಟು ಮತ್ತೆಯಾಂಗಾದೆ ಗೊತ್ತಿದ್ದರ ಹೇಳು'' ಎಂದ ದಾದ.

''ದಾನವ್ವ ಒಟ್ಟಾರೆ ಆಗ ಮಟದಾಗೆ ಇದ್ದಳು. ಆಕೆಗೆ ಎಲ್ಲಾ ಗೊತ್ತೈತಿ. ಬೇಕಾರ ಆಕಿನ್ನಕರೆಸಿ ಎಲ್ಲಾ ಕೇಳಕೋರಿ ''ಚಿಮಣಾ ತಲೆ ತಗ್ಗಿಸಿ ನುಡಿದಳು. ಇಷ್ಟೇ ಜನರೆದುರು ಆವ ಅಪಮಾನ ಅವಳಿಗೆ ಮರಣಪ್ರಾಯವಾಗಿತ್ತು.'' [೧೪] (ಪು-೬೬)

ಚಮಣಾಳು ತನಗಾಗಿರುವ ಅನ್ಯಾಯವನ್ನು ನೇರವಾಗಿ ಹೇಳಿಕೊಳ್ಳಲಾರದೆ ದಾನವ್ವನನ್ನು ಸಾಕ್ಷಿಯಾಗಿ ಕರೆಯಲು ಹೇಳುವಂತೆ ಹದ್ದನ್ನು ಮತ್ತು ಪವಿತ್ರ ಸ್ವಾಮೀಜಿಯ ಅಂತರಂಗದ ಹುಳುಕು ಬಯಲಾಗುವ ಸಾಧ್ಯತೆ ಇದೆ ಎನ್ನುವಂತಿದೆ ಮೇಲಿನ ಸಂದರ್ಭ.

''ಓತಿಕಾಟಕ್ಕೆ ಬೇಲಿ ಸಾಕ್ಷಿ. ಅಷ್ಟೋಬಾಕಿ ಊರ ಹಾದರಗಿತ್ತಿ. ಅದನ್ನು ಕರೆಸಿ ಕೇಳಬೇಕಂತ. ಈಕೆ ಹೇಳತಾಳ'' ಎಂದು ಪಡದಯ್ಯನವರು ತಿರಸ್ಕಾರದ ನಗೆ ನಕ್ಕರು.'' [೧೫] (ಪು-೬೬)

ಪಡದಯ್ಯನ ತಿರಸ್ಕಾರದ ನಗೆಯಲ್ಲಿ ಹೆಣ್ಣಿನ ಬಗ್ಗೆ ಇರುವ ಅವನ ತಾತ್ಸಾರತಕೆ ಉದಾಸೀನತೆ ಎದ್ದು ಕಾಣುತ್ತದೆ.

''ಚಿಮಣಾಳ ಮುಂದಿನ ಜೀವನ ಇದರಿಂದ ಸುಗಮವಾಗಬಹುದೇ ? ಪಡದಯ್ಯ ಹೇಳಿ ಕೇಳಿ ಪಟಿಂಗ. ದಾನವ್ವನಂತೆಯೇ ಚಿಮಣಾಳನ್ನು ಹೊರದೂಡಿದರೆ ? ಮುಂದೆ ಅವಳಿಗೆ ಯಾರು ಗತಿ ? ಈಗ ಕಾಲು ಜಾರಿದ್ದರೂ ಚಮಣಾಳಲ್ಲಿ ಅಭಿಮಾನಕ್ಕೇನೂ ಕೊರತೆ ಇಲ್ಲ. ಅವಳೂ ನಾನಾ ಕಾಕನ ಹಾದಿಯನ್ನೇ ಹಿಡಿದರೆ ? ಹಾಗಾದರೆ ನಾನೇ ಅವಳನ್ನು ಕೈಯಾರೆ ಕೊಂದಂತಾಗುವುದಲಿಲ್ವೇ? ಆಮೇಲೆ ಊರಲ್ಲಿ ನನ್ನ ಪ್ರತಿಷ್ಠೆಯ ಗತಿ ಏನು ?'' [೧೬] ( ಪು-೬೬)

ಮೇಲಿನ ಸಂದರ್ಭವು ಚಿಮಣಾಳ ಭವಿಷ್ಯದ ಬಗ್ಗೆ ಆತಂಕವಿದೆ. ಪಡದಯ್ಯ ದಾನವ್ವನನ್ನು ಹಾಳು ಮಾಡಿದಂತೆ ಚಿಮಣಾಳನ್ನು ಹೊರದೂಡಿದರೆ ಗತಿಯೇನು? ಎನ್ನುವ ಪ್ರಶ್ನೆ ಮೇಲಿನ ಸಂದರ್ಭದಲ್ಲಿ ವ್ಯಕ್ತವಾಗುತ್ತದೆ.

''ಚಿಮಣಾಳ ಯೌವ್ವನ,ಆವಳ ಮನಸೆಳೆಯುವ ರೂಪ ನಾನಾನ ಕೊಲೆಯ ಮೂಲವೆಂದರೆ ಯಾರಾದರೂ ನಂಬಬಹುದೇ ? ಈ ನಾಟಕದಲ್ಲಿ ಬಾಪೂ ಸಾಹೇಬ ಕೀಚಕನ ಪಾತ್ರವಹಿಸಿದ್ದ ಚಿಮಣಾಳನ್ನು ಮದುವೆಯಾಗಲು ಪ್ರೇರೆಪಿಸಬೇಕೆಂದು ಅಕ್ಕನನ್ನು ಕಾಡಿದ್ದ ಅವಳು ಅದಕ್ಕೊಪ್ಪಲಿಲ್ಲ. ಅನಾಯಾಸವಾಗಿ ಈ ನಾಟಕದಲ್ಲಿ ಇನ್ನೊಂದು ಪಾತ್ರದ ಪ್ರವೇಶವಾಯಿತು. ಪಡದಯ್ಯ ಸಲಹೆಗಾರನಾಗಿ ಬಂದವನು ತಾನೇ ಪಾತ್ರಧಾರಿಯಾದ. ಚಿಮಣಾ ಅವನಿಗೆ ಬಲಿಯಾದಳು. ರಕ್ಷಣೆಗಾಗಿ ಅವಳೀಗ ಬಾಪೂ ಸಾಹೇಬನನ್ನು ಮೊರೆ ಹೋಗಬೇಕಾಯಿತು. ಆದರೆ ಬಾಪೂ ಸಾಹೇಬ ಈಗ ಒಪ್ಪಲಿಲ್ಲ. ಚಿಮಣಾ ದಿಕ್ಕು ತೋಚದೆ ನಿಂತಳು. ಅವಳೆಷ್ಟು ಕಣ್ಣೀರು ಸುರಿಸಿದರೂ ಪುತಳೀಬಾಯಿ ಸಹಾಯ ಮಾಡಲಾಗಿರಲಿಲ್ಲ.''[೧೭] (ಪು-೧೦೨)

ಹೇಗೆ ಪುರುಷ ಯಜಮಾನಿಕೆ ಸ್ಥಿತಿಯು ಒಂದು ಹೆಣ್ಣನ್ನು ಬಲಿಪಶು ಮಾಡುತ್ತದೆ ಎಂಬುದು ವ್ಯಕ್ತವಾಗುತ್ತದೆ.

''ಊರಲ್ಲೇ ಇದ್ದು ಬಂದು ಹೋಗುವವರ ಮೂಲಕ ಚುಚ್ಚುಮಾತುಗಳನ್ನು ನಾಗವೇಣಿಗೆ ಹೇಳಿ ಕಳುಹಿಸುತ್ತಲೇ ಇದ್ದನಲ್ಲ. ಕೆಲವೊಂದು ಮಾತುಗಳು ನಾಗವೇಣಿಯ ಎದೆಯನ್ನು ಸೀಳುವಂಥವು. ಹೊಸ ಗಂಡ ಬಂದರೆ ಹಳೆಯ ಗಂಡ ಹೆಚ್ಚೇ ಎನ್ನುವ ತನಕವೂ ಅವನ ನಾಲಿಗೆ ಮುಂದುವರಿಯಿತು. ಇದರಿಂದ ನಾಗವೇಣಿಯ ಮನಸ್ಸು ಕಠಿಣವಾಯಿತು. ಅನುರೂಪದ ಬದಲು ಹಗೆತನಕ್ಕೆ ಅದರಿಂದ ಎಡೆಯಾಯಿತು. ಆದರೆ ಗಂಡನಿಗೆ ಪ್ರತಿಯಾಗಿ ಯಾವ ಮಾತನ್ನು ಅವಳು ತಿಳಿಸಲು ಹೋಗಲಿಲ್ಲ. ಈ ನಡುವೆ ಸತ್ಯಭಾಮೆಯೇ ಮಗನ ಮಾತನ್ನು ಕೇಳಿ ಕೇಳಿ ಕಾಳಿಂಗ ಹಾವಾಗಿದ್ದಳು. 'ಇಂತ ಮಕ್ಕಳು ಹುಟ್ಟುವ ಬದಲು ಸತ್ತರೇನು ? ಎಂದೂ ಹೇಳಿದಳು. ಸರಸೋತಿಗೆ ಮಾತ್ರ ಕಾಶಿಯಾತ್ರೆಯಿಂದ ದೊರೆತಶಾಂತಿಯು ಲಚ್ಚನ ಪ್ರಕರಣದಿಂದ ಬಲವಾಗಿ ಕಲ್ಲೋಲವಾಯಿತು ? ನಾನು ಎಷ್ಟು ಬೇಗ ಕಣ್ಮುಚ್ಚಿದ್ದರೂ ಅನುಕೂಲ. ಆದರೆ ಇದು ದಕ್ಷಿಣಾಯನ ಅಲ್ಲಿ ಸ್ವರ್ಗ ಹೆಬ್ಬಾಗಿಲು ಹಾಕಿರುತ್ತಾರೆ. ಮಕರ ಸಂಕ್ರಾಂತಿ ಕಳೆದ ಮೇಲೆ ಸತ್ತರೆ ಆಗುತ್ತಿತ್ತು' ಎನ್ನುತ್ತಾಳೆ.''[೧೮] (ಪು-೨೩೦)

''ನನ್ನ ಮೇಲೆ ಅವರಿಗೆ ಕರುಣೆ ಬಾರದೆ ಹೋದರೂ ಚಿಂತೆಯಿಲ್ಲ. ಆದರೆ ತಮ್ಮದೇ ಕೂಸನ್ನು ಕಠಿಣ ಬಯಸರ ತಂದೆಯುಂಟೆ''.[೧೯] (ಪು- ೨೭೦)

''ಅಮ್ಮಾ ನನ್ನ ಹಣೆಯ ಬರಹಕ್ಕೆ ನನಗೆ ಯಾರಿಂದಲೂ ಸುಖ ಸಿಗಲಾರದು. ನಾನು ಏನೋ ಪಾಪ ಮಾಡಿ ಬಂದಿರಬೇಕು. ಅದರಿಂದಲೇ ಈ ವ್ಯಥೆ''. ಇನ್ನು ರಾಮನೇನು ನನಗೆ ಹೆಚ್ಚಿನ ಸುಖ ಕೊಟ್ಟಾನು'' [೨೦] ಎಂದು ಕೊಂಡಳು. ಇದೇ ಕಠಿಣವಾದ ತೀರ್ಮಾನ. (ಪು- ೩೩೬).

ಲಚ್ಚನು ತನ್ನ ಮಾನವೀಯ ಸಂಬಂಧಗಳನ್ನು ಕಳೆದುಕೊಂಡು ಮಾನವನೊಂದಿಗೆ ವಾಸಮಾಡುವ ವಿಕೃತ ಜೀವಿ ಅವನ ಮೈಯೊಳಗೆ ವಿಷಸರ್ಪಗಳು ಕುಟುಕುವ ಚೇಳುಗಳು ಊಸಂಬಳ್ಳಿಯಂತಹ ಜೀವಿಗಳು ವಾಸಮಾಡುತ್ತಿದ್ದವು. ಅವುಗಳೇ ಅವನ ಮೌಲ್ಯಗಳಾಗಿವೆ.

ಪುರುಷ ಸಂಸ್ಕೃತಿಯೊಂದು ತನ್ನದೇ ಆದ ಸಮಾಜವನ್ನು ರೂಪಿಸಿಕೊಂಡು ಹೆಣ್ಣನ್ನು ತನ್ನೆಡೆಗೆ ಆಕರ್ಷಿಸುವ ಒಗ್ಗಿಸಿಕೊಳ್ಳುವುದರ ಮೂಲಕ ಅವಳ ಸ್ವತಂತ್ರಕ್ಕೆ ಬದುಕಿಗೆ ಹೇಗೆ ಅಡ್ಡಿಯನ್ನುಂಟು ಮಾಡುತ್ತವೆಂಬುತ್ತನೆಂಬುದನ್ನು ನಾವು ನೋಡುತ್ತಲೇ ಇರುತ್ತವೆ. ಇದಕ್ಕೆ ಮುಖ್ಯ ಕಾರಣ ಹೆಣ್ಣಿಗೆ ಅಥವಾ ಮಹಿಳೆಗೆ 'ನಾಲ್ಕು ಗೋಡೆಗಳಾಚೆ' ನೋಡುವ ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕವಾಗಿ ಅಸಬಲಗೊಂಡ ಬಾಗಿಲುಗಳೇ ಪ್ರಧಾನವಾಗಿರುವುದು. ಹೀಗಾಗಿ ಈ ಅಧ್ಯಾಯದಲ್ಲಿ 'ಪುರುಷನ ಇಕ್ಕಳಕ್ಕೆ ಸಿಲುಕುವ ಹೆಣ್ಣು ಯಾವ ರೀತಿ ಶೋಷಣೆಗೊಳಗಾಗುತ್ತಾಳೆಂಬುದನ್ನು ಅದೇ ರೀತಿ ತನ್ನ ಅಸಬಲತೆಯನ್ನು ಹೇಗೆ ಪ್ರತಿಭಟಿಸುತ್ತಾಳೆಂಬುದನ್ನು ಚರ್ಚಿಸಿದ್ದೇನೆ.

## ಅಡಿಟಿಪ್ಪಣಿ

೧. ಡಾ. ಗುರುಲಿಂಗ ಕಾಪಸೆ (ಸಂ.), 'ಶಿವರಾಮ ಕಾರಂತ ಸಾಂಸ್ಕೃತಿಕ ಅನುಸಂಧಾನ', ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧ನೇ ಮುದ್ರಣ, ೨೦೦೩, 'ಹೆಣ್ಣಿನ ಶೋಷಣೆ ಮತ್ತು ಹೋರಾಟ'! ಲೇಖನ. ಪು- ೭

೨. ಡಾ. ಕೆ.ಶಿವರಾಮ ಕಾರಂತ, 'ಮರಳಿ ಮಣ್ಣಿಗೆ' ಸಪ್ನ ಬುಕ್‌ಹೌಸ್, ಬೆಂಗಳೂರು, ಮೇ ೨೦೦೬, ಮರುಮುದ್ರಣ. ಪು- ೪-೫.

೩. ಅದೇ ಪು - ೧೨

೪. ಅದೇ ಪು - ೩೦

೫. ಅದೇ ಪು - ೪೦

೬. ಅದೇ ಪು - ೫೩

೭. ಅದೇ ಪು - ೫೮

೮. ಅದೇ ಪು - ೧೬೫

೯. ಅದೇ ಪು - ೧೯೭

೧೦. ಅದೇ ಪು - ೨೦೨

೧೧. ಅದೇ ಪು - ೨೦೩

೧೨. ರಾವಬಹದ್ದೂರ ' ಗ್ರಾಮಾಯಣ' ಕಾದಂಬರಿ. ಉಷಾಸಾಹಿತ್ಯಮಾಲೆ, ಮೈಸೂರು. ೩ನೇ ಮುದ್ರಣ ೧೯೮೧. ಪು-೬೭.

೧೩. ಅದೇ ಪು - ೬೪

೧೪. ಅದೇ ಪು - ೬೬

೧೫. ಅದೇ ಪು - ೬೬

೧೬. ಅದೇ ಪು - ೬೬

೧೭. ಅದೇ ಪು - ೧೦೨

೧೮. 'ಮರಳಿ ಮಣ್ಣಿಗೆ' ಕಾದಂಬರಿ. ಪು-೨೩೦.

೧೯. ಅದೇ ಪು - ೨೭೦

೨೦. ಅದೇ ಪು - ೩೩೬

# ಅಧ್ಯಾಯ - ೪

## ಕೇಂದ್ರ ಪಾತ್ರಗಳು ಮತ್ತು ಕಾಲಘಟ್ಟದ ವೈಶಿಷ್ಟ್ಯತೆ

ಯಾವುದೇ ಒಂದು ಕೇಂದ್ರ ಪಾತ್ರವು ತನ್ನದೇ ಆದ ಕಾಲಘಟ್ಟದಲ್ಲಿ ಆಳವಾಗಿ ನಿಲ್ಲುವಂತಹ ಬೇರುಗಳನ್ನು ಮಣ್ಣಿಗೆ ಇಳಿಬಿಟ್ಟುಕೊಂಡಿರುತ್ತದೆ. ಆಯಾಯ ಕಾಲಘಟ್ಟದ ಸಾಂಸ್ಕೃತಿಕ ಪರಿಸರದ ಅಂಶಗಳೇ ಕೇಂದ್ರಪಾತ್ರಗಳನ್ನು ರೂಪಿಸುವ ಮಾರ್ಪಾಡು ಮಾಡುವ ಬೆಳೆಯಿಸುವ ಉಳಿದೆಲ್ಲ ಪಾತ್ರಗಳ ಮೇಲೆ ಪ್ರಭಾವ ಬೀರುವ ಸಾಮರ್ಥ್ಯಗಳನ್ನು ತನ್ನೊಳಗೆ ರೂಪಿಸಿಕೊಂಡಿರುತ್ತದೆ. ಕಾಲಘಟ್ಟವೂ ಕೇಂದ್ರ ಪಾತ್ರಗಳ ಒಳಿತು ಮತ್ತು ಕೆಡುಕುಗಳ ಏಳು-ಬೀಳುಗಳ ಸ್ಥಿತಿಗತಿಯನ್ನು ರೂಪಿಸಿರುತ್ತವೆ. ಅದಕ್ಕಾಗಿಯೇ ಏನೋ ಕಾದಂಬರಿಯಲ್ಲಿ ಬರುವ ಎಲ್ಲಾ ಪಾತ್ರಗಳು ಕೇಂದ್ರಪಾತ್ರಗಳಾಗಿ ಉಳಿಯುವುದಿಲ್ಲ. ಹಾಗೆಯೇ ಎಲ್ಲಾ ಅಂಚಿನ ಪಾತ್ರಗಳು ಕೇಂದ್ರ ಪಾತ್ರಗಳಾಗುವುದಿಲ್ಲ. ಆದರೆ ಕೇಂದ್ರಪಾತ್ರಗಳು ಅಂಚಿನ ಪಾತ್ರಗಳ ಮಟ್ಟಿಗೆ ಇಳಿಯಬಹುದು. ಅದೇ ರೀತಿ ಅಂಚಿನ ಪಾತ್ರಗಳು ಕೇಂದ್ರ ಪಾತ್ರಗಳ ಎತ್ತರಕ್ಕೆ ಏರಲು ಪ್ರಯತ್ನಿಸಬಹುದು.

ಕೇಂದ್ರಪಾತ್ರಗಳು ಯಾವಾಗಲೂ ಯಜಮಾನಿಕೆ, ಅಧಿಕಾರ, ದರ್ಪ, ಹೊಂಚುತನ, ಕಪಟತನ, ಆದರ್ಶ ಮಾನವೀಯಗುಣಗಳು ಪ್ರಾಮಾಣಿಕತೆ, ನೈತಿಕತೆ, ಜವಾಬ್ದಾರಿ ಮತ್ತು ವಿವೇಕ ಪ್ರಜ್ಞೆ, ಒಳಿತು ಕೆಡುಕುಗಳು, ವಿಮರ್ಶ ಕಲೆಗಾರಿಕೆ, ಗುಣವಂತಿಕೆ ಇವುಗಳೆಲ್ಲವನ್ನು ಮೈಗೂಡಿಸಿಕೊಂಡಿರುತ್ತವೆ. ಈ ಕಾರಣದಿಂದಾಗಿಯೇ ಕೇಂದ್ರ ಪಾತ್ರಗಳು ಉಳಿದೆಲ್ಲ ಪಾತ್ರಗಳಿಗಿಂತ ಭಿನ್ನವಾಗಿ ಕಾದಂಬರಿಯ ಕಾಂತೀಯ ಕೇಂದ್ರವಾಗಿರುತ್ತದೆ.

'ಮರಳಿ ಮಣ್ಣಿಗೆ' ಕಾದಂಬರಿಯು ಮೂರು ತಲೆಮಾರಿನ ವಿಕಾಸದ ಕತೆಯಾಗಿದೆ. ಮೊದಲ ತಲೆಮಾರಿನ ಪಾತ್ರಗಳು ರಾಮ ಐತಾಳ ಪಾರೋತಿ, ಸರಸೋತಿ, ಸತ್ಯಭಾಮೆ, ಶೀನ ಮತ್ತು ನಾರಾಯಣಯ್ಯ ಇತ್ಯಾದಿ.

ರಾಮ ಐತಾಳ ಮೊದಲ ತಲೆಮಾರಿನ ಕೇಂದ್ರ ಪಾತ್ರವಾಗಿದೆ. ಹಳೆ ತಲೆಮಾರಿನ ಗ್ರಾಮೀಣ ಸಂಸ್ಕೃತಿಯ ಎಲ್ಲ ಗುಣ ಅವಗುಣಗಳು ಇವನಲ್ಲಿ ಮೈಗೂಡಿವೆ. ತನ್ನ ಯಜಮಾನಿಕೆಯ ಮೂಲಕ ಕೌಟುಂಬಿಕ ಜವಾಬ್ದಾರಿಯನ್ನು ತಾನೇ ಹೊತ್ತಿರುತ್ತಾನೆ. ಗ್ರಾಮೀಣ ಸಮಾಜದ ಗಟ್ಟಿತನ ಇವನಲ್ಲಿ ಇರುವುದರಿಂದ ಪ್ರಕೃತಿ- ಪರಿಸರದೊಂದಿಗೆ

ಕಾದಾಡುತ್ತಾನೆ ಜೋರಾಗಿ ಬೀಸುವ ಸುಂಟರಗಾಳಿ, ದಿನನಿತ್ಯ ಸುರಿಯುವ ಮಳೆ, ಇದರಿಂದುಂಟಾಗುವ ದೈನಂದಿನ ಮೂಲ ವ್ಯವಸ್ಥೆಗಳಿಗೆ ಅಡಚಣೆ. ಉದಾ : ಮಳೆಬೀಳುವ ಸಂದರ್ಭದಲ್ಲಿ ಉರುವಲುಗಳನ್ನು ಹುಡುಕುವುದು.

ಇವನಿಗೆ ತನ್ನದೇ ಆದ ಪ್ರತಿಷ್ಠೆಯಿಂದ ಪೌರೋಹಿತ್ಯ ವಿದ್ಯೆಯವನಾಗಿದ್ದು ತನ್ನ ಬದುಕನ್ನು ಅದನ್ನೇ ನಂಬಿಕೊಂಡು ಸಾಗಿಸುವ ಪಿತ್ರಾರ್ಜಿತ ಆಸ್ತಿಯಲ್ಲಿ ಬೆಳೆ ಬೆಳೆಯುವ ಜೀವನೋಪಾಯಕ್ಕೆ ಅವುಗಳನ್ನೇ ನಂಬಿ ಬದುಕುವ ಪರಿಪಾಠ ರಾಮಐತಾಳರಲ್ಲಿದೆ. ಧಾರ್ಮಿಕತೆ, ಪರಂಪರೆ ಸಂಪ್ರದಾಯ, ಆಚರಣೆ ಇವೆಲ್ಲವೂ ಶಿಸ್ತಿನಿಂದ ಕೂಡಿದ್ದು ಅವರ ವ್ಯಕ್ತಿತ್ವವನ್ನು ನಿಯಂತ್ರಿಸುತ್ತವೆ. ತನ್ನ ತಂಗಿ ಮತ್ತು ಹೆಂಡತಿ ಪಡುವ ಕಷ್ಟವನ್ನು ಕಂಡು ಕೆಲವಮ್ಮೆ ಮಾತ್ರವೇ ಸಹಾನುಭೂತಿ ಮತ್ತು ಕರುಣೆಯನ್ನು ತೋರಿಸುತ್ತಾನೆ.

ತನಗೆ ಹೆಂಡತಿ ಇದ್ದರೂ ಮಕ್ಕಳ ನೆಪ ಇಟ್ಟುಕೊಂಡು ಇನ್ನೊಂದು ಮದುವೆಯಾಗುವುದು ತನ್ನ ಸ್ನೇಹಿತ ಶೀನಮಯ್ಯ ಮನೆಗೆ ಹೆಬ್ಬಾಗಿಲನ್ನು ಹಾಕಿಸಿದುದು; ಅವನ ಮಕ್ಕಳನ್ನು ಬೆಂಗಳೂರು ಹೋಟೆಲು ಉದ್ಯಮಕ್ಕೆ ಕಳುಹಿಸುವುದನ್ನು ಕಂಡು ಮತ್ಸರ ಪಡುತ್ತಾನೆ. ತನ್ನ ಪೌರೋಹಿತ್ಯದ ಬಗ್ಗೆ ತಾತ್ಸಾರವನ್ನುಂಟು ಮಾಡಿ ಪರೋಕ್ಷವಾಗಿ ಅನ್ಯ ಸಂಸ್ಕೃತಿಗೆ ಒಳಗಾಗಿ ಲಚ್ಚನಿಗೆ ಇಂಗ್ಲಿಷ್ ವಿದ್ಯಾಭ್ಯಾಸವನ್ನು ಕೊಡಿಸುವುದು ಅನಂತರ ಲಚ್ಚನಿಂದಾಗುವ ಆಘಾತಗಳನ್ನು ಎದುರಿಸುವ ಸಾಮರ್ಥ್ಯವನ್ನು ಹೊಂದಿರುತ್ತಾನೆ. ಲಚ್ಚನು ಬೆಳೆಸಿಕೊಂಡ ದುರಭ್ಯಾಸಗಳಿಗೆ ಬೇಸರ ವ್ಯಕ್ತಪಡಿಸಿ, ತನ್ನ ಸೊಸೆ ಅನಾಥಳಾಗಬಾರದೆಂದು ತನ್ನ ಸಂಪೂರ್ಣ ಆಸ್ತಿಯನ್ನು ಸಹಾನುಭೂತಿಯಿಂದ ಅವಳ ಹೆಸರಿಗೆ ಮಾಡುತ್ತಾನೆ. ತನ್ನ ಹೆಂಡತಿ ಪಾರೋತಿ ಸಾಯುವ ಗಳಿಗೆಯಲ್ಲಿ ನನ್ನಿಂದ ನಿನಗೆಷ್ಟು ನೋವಾಯಿತೋ ?'' ಎಂದು ಕಂಬನಿ ಗೆರೆಯುತ್ತಾನೆ. ತನ್ನ ಕೊನೆಯ ಉಸಿರಿನಲ್ಲಿ ತಾನು ದ್ವೇಷಿಸುತ್ತಿದ್ದ ಶೀನುಮಯ್ಯನನ್ನು ಕ್ಷಮಿಸುತ್ತಾನೆ. ಹೀಗೆ ರಾಮ ಐತಾಳರ ವ್ಯಕ್ತಿತ್ವವು ದೇಸಿಯತನದ ಮೌಲ್ಯಗಳಲ್ಲೇ ನಶಿಸುತ್ತದೆ.

ಎರಡನೆಯ ತಲೆಮಾರಿನ ಪ್ರತಿನಿಧಿಯಾಗಿ ಲಚ್ಚ ಕಾಣಿಸಿಕೊಳ್ಳುತ್ತಾನೆ. ಲಚ್ಚನಲ್ಲಿ ರಾಮ ಐತಾಳರ ಶಾಶ್ವತ ಮೌಲ್ಯಗಳು ನಶಿಸಿ ಆಧುನಿಕತೆಯ ಒಡಕಿನ ಪ್ರಕ್ರಿಯೆಗಳಲ್ಲಿರುವ ಮೌಲ್ಯಗಳನ್ನು ತನ್ನದಾಗಿ ರೂಢಿಸಿಕೊಳ್ಳುತ್ತಾನೆ. ಇವನ ಕಾಲಘಟ್ಟವು ಸಂಕೀರ್ಣತೆಯಿಂದ ಕೂಡಿದ್ದು ಅವಕಾಶಗಳ ಹೆಚ್ಚು ಬಲಪ್ರದವಾಗಿರುತ್ತವೆ.

ಗ್ರಾಮೀಣ ಸಂಸ್ಕೃತಿಯಿಂದ ಉಡುಪಿ, ಮಂಗಳೂರು, ಪಡುವನ್ನರು, ಬಾಂಬೆ, ಮದರಾಸು, ಕೇರಳ ಇಂತಹ ನಗರಗಳಿಗೆ ಪ್ರವೇಶಿಸುವ ಮೂಲಕ ಇಂಗ್ಲಿಷ್ ವಿದ್ಯಾಭ್ಯಾಸವನ್ನು ಕಲಿತು ತನ್ನ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುವಲ್ಲಿ ವಿಫಲನಾಗುತ್ತಾನೆ.

ಲಚ್ಚನಲ್ಲಿ ಪ್ರತಿಭೆಯು ಏಕಮುಖವಾಗಿದ್ದು ಜೂಜು, ಗೆಳೆಯರ ಬಳಗ, ಹರಟೆ, ಅನೈತಿಕಸಂಬಂಧಗಳು, ಪಲಾಯನ ಓದಿನ ಬಗ್ಗೆ ನಿರಾಸಕ್ತಿ, ಮೋಜು ಮತ್ತು ಹಣದ ಚಟ ಇಂತಹ ಕಾಲಘಟ್ಟವು ರೂಪಿಸಿರುವ ಲಚ್ಚನ ಗುಣಗಳು.

ಅದಕ್ಕಾಗಿಯೇ ಲಚ್ಚನು ತನ್ನ ಪ್ರಪಂಚವನ್ನು ವಿಸ್ತರಿಸಿಕೊಳ್ಳುತ್ತ ಐತಾಳರಿಂದ ಕೋಡಿಯಿಂದ ಅವನು ದೂರ ಸರಿಯುತ್ತಾನೆ. ತನ್ನ ತಂಗಿ ಸುಬ್ಬಿಯ ಉಪಚಾರವನ್ನು ತಡೆಯಲಾರದವನಾಗುತ್ತಾನೆ. ದೊಡ್ಡಮನುಷ್ಯರ ಮನೆಯ ಹುಡುಗಿ ನಾಗವೇಣಿಯನ್ನು ಮದುವೆಯಾದರೂ ಅವಳನ್ನು ವಿವಿಧ ರೀತಿಗಳಲ್ಲಿ ಹಿಂಸಿಸಿ ಅವಳಿಂದಲೂ ದೂರವಾಗುತ್ತಾನೆ. ರಾಮಐತಾಳರ ಕನಸುಗಳನ್ನು ಭಗ್ನಗೊಳಿಸುತ್ತಾನೆ. ನಾಗವೇಣಿಯನ್ನು ವಂಚಿಸಿ ಅವಳಲ್ಲಿನ ಹಣ ಮತ್ತು ಆಸ್ತಿಯನ್ನು ತಂತ್ರಗಳಿಂದ ಸುಲಿಗೆ ಮಾಡುತ್ತಾನೆ. ತನ್ನ ಮನೆಗೆ ಬಂದ ಮಗನನ್ನು ನೋಡದೆ, ತನ್ನ ತಂದೆಯ ಅಸ್ತಿತ್ವತೆಯನ್ನು ಕಾಣದೆ ಆಧುನಿಕ ಲೈಂಗಿಕ ರೋಗಗಳನ್ನು ಅಂಟಿಸಿಕೊಂಡ ವಿಕೃತಕಾಮಿಯಾಗುತ್ತಾನೆ.

ಆಧುನಿಕ ಪ್ರಪಂಚ ಒಂದರಲ್ಲಿ ಲಚ್ಚ ಕಳೆದುಕೊಂಡದ್ದೇನು? ಎಂಬ ಪ್ರಶ್ನೆಗೆ ಯು.ಆರ್. ಅನಂತಮೂರ್ತಿಯವರು ಆಲೋಚಿಸಿರುವುದನ್ನು ನೆನೆಯಬಹುದು. ''ಬದುಕೆಂದರೆ ಅದು ಎಷ್ಟು ಇಕ್ಕಟ್ಟಿನದು, ಎಷ್ಟು ಸ್ವಾತಂತ್ರ್ಯ ಪಡೆದದ್ದು - ತತ್ವಜ್ಞಾನಿಗಳ ಸಮಸ್ಯೆಯಾದ ಈ Neccessity and Freedom ''ಮರಳಿ ಮಣ್ಣಿಗೆಯಲ್ಲಿ ಉದ್ದ ವಾಕ್ಯ ವಾಕ್ಯದಲ್ಲೂ ಹೆಣೆಯುತ್ತು ಹೋಗುವ ಧ್ಯಾನವಾಗಿದೆ. ಋಣವಿಲ್ಲದೆ ಬದುಕಬೇಕೆಂಬ ನಿರಂತರ ಕಷ್ಟದ ದುಡಿಮೆಯಲ್ಲೇ ಸ್ವಾವಲಂಬನೆಯ ಹಠದ ಸ್ವಾತಂತ್ರ್ಯದ ಕಲ್ಪನೆಯಿದೆ. ಈ ಹಠವಿಲ್ಲದಿದ್ದಾಗ ಲಚ್ಚನ ಸ್ವಾತಂತ್ರ್ಯದ ಅಪೇಕ್ಷೆ ಸ್ವೈರ್ಯವಾಗಿ ಬಿಡುತ್ತದೆ. ಬೇಸಾಯ ಜೀವನದ ಕ್ರೂರ ವಾಸ್ತವಗಳನ್ನು ಒಪ್ಪಿಕೊಳ್ಳುವ ಹಳ್ಳಿಯ ಜೀವನವೆಂದರೆ ಬೇಸರ ಪಡುವ ಲಚ್ಚ, ಲಾಲಸೆ ಪ್ರವೃತ್ತಿಯುಳ್ಳವನಾಗುತ್ತಾನೆ. ಅವನನ್ನು ಹಾಗಾಗುವಂತೆ ಮಾಡುವುದು ಕಾದಂಬರಿಯ ಉಳಿದ ಪಾತ್ರಗಳಲ್ಲಿ ಮುಖ್ಯವಾಗಿ ತಂದೆ ರಾಮ ಐತಾಳನಲ್ಲೂ ಇರುವ ಕಷ್ಟದ ದುಡಿಮೆಯಿಂದ ಬಿಡುಗಡೆ ಪಡೆಯುವ ಹಂಬಲವೆಂಬುದೂ ಕಾದಂಬರಿಯ ನೈತಿಕ ಪ್ರಜ್ಞೆಗೊಂದು ಸೂಕ್ಷ್ಮವನ್ನು ತರುತ್ತದೆ. ಐತಾಳರಿಗೂ ಲಚ್ಚ ತನ್ನಂತೆ

ವೈದಿಕನಾಗುವುದು ಬೇಡ. ಲೌಕಿಕನಾಗಬೇಕು ಎಂಬ ಹಂಬಲದಲ್ಲೇ ಬದಲಾಗುತ್ತಿರುವ ಕಾಲದ ಪ್ರಭಾವವಿದೆ. ಲೌಕಿಕ ಶೀಮನಯ್ಯ ಮಯ್ಯರಾದದ್ದನ್ನು ಐತಾಳ ನೋಡಿದ್ದಾನೆ. ಊರಿನ ಗುರಿಕಾರರ ಮದುವೆಯಲ್ಲಿ ಅವಮಾನಿತನಾದ ಐತಾಳ ಅಂತು ಊರಿನ ಗುರಿಕಾರರ ಕೈಯಲ್ಲಿ ಇದೊಂದು ಶ್ರಾದ್ಧದ ಬ್ರಾಹ್ಮಣ ಅನಿಸಿಕೊಳ್ಳದಿದ್ದರೆ ಸಾಕು. ಎಂದು ಆಸೆ ಪಡುತ್ತಾನೆ. ನಿಷ್ಠುರ ದುಡಿಮೆಯಿಂದ ನಿವೃತ್ತನಾಗುವ ಅಪೇಕ್ಷೆ ಲಚ್ಚನನ್ನು ಹಿಂಡನಗದ ಪುಂಡನನ್ನಾಗಿ ಮಾಡುತ್ತದೆ. ಸ್ವತಃ ಕಾರಂತರೇ ಲೇಖಕರಾದದ್ದು ಹಳ್ಳಿಯ ವಿರಾಮವಿಲ್ಲದ ದುಡಿಮೆಯ ಬದುಕಿನ ಅನಿವಾರ್ಯತೆಗಳಿಂದ ಮುಕ್ತರಾದದ್ದರಿಂದಲೂ ಇರಬಹುದು ಎಂಬುದನ್ನು ನೆನೆದಾಗ ಈ ದಿಕ್ಕಿನಲ್ಲಿ ಲೇಖಕರು ತೋರಿಸುವ ದ್ವಂದ್ವಗಳು ಅರ್ಥಪೂರ್ಣವಾಗುತ್ತವೆ. ಕನ್ನಡದ ಯಾವ ಲೇಖಕ ತನ್ನ ವೈಚಾರಿಕತೆಯಲ್ಲಿ ಬದಲಾವಣೆ ಮತ್ತು ಪ್ರಗತಿಯ ಬೆಂಬಲಿಗನಾಗಿದ್ದರೂ ಸಹ ತನ್ನ ಕಲಾಕೃತಿಯಲ್ಲಿ ಬದಲಾವಣೆ ಬಗ್ಗೆ ನಿಸ್ಸಂದಿಗ್ಧ ಧೋರಣೆ ತಾಳಿದ್ದಾನೆ.''! [೧] (ಪು-೧೭೧-೧೭೨)

ನಾಗವೇಣಿ ಮೊದಲ ತಲೆಮಾರು ಮತ್ತು ಮೂರನೇ ತಲೆಮಾರಿನ ಕೊಂಡಿಯಾಗಿದ್ದಾಳೆ. ಲಚ್ಚನ ಬೇಜವಾಬ್ದಾರಿಯ ಪ್ರತ್ಯೇಕತೆಯ ಪರಿಣಾಮ ಮತ್ತು ತನ್ನ ಮಗ ರಾಮುನ ಜವಾಬ್ದಾರಿ ಇವಳ ಮೇಲೆಉಂಟಾಗುತ್ತದೆ. ಮರಳಿ ಮಣ್ಣಿಗೆ ಯ ಪಾತ್ರಗಳಲ್ಲೆಲ್ಲ ಹೆಚ್ಚು ಸಂಕೀರ್ಣತೆಯನ್ನು ಹೊಂದಿರುವ ಪಾತ್ರವೆಂದರೆ ಅದು ನಾಗವೇಣಿ.

ಒಂದು ರೀತಿಯಿಂದ ಅವಳು ಸರಸೋತಿ ಮತ್ತು ಪಾರೋತಿಯರು ನೆಚ್ಚಿಕೊಂಡು ಬಂದ ಸಾಂಪ್ರದಾಯಕ ಮೌಲ್ಯಗಳನ್ನು ಪ್ರತ್ಯೇಕಿಸಿದರೆ ರಾಮನು ಪ್ರತಿನಿಧಿಸುವ ಹೊಸ ಮೌಲ್ಯಗಳನ್ನು ಪ್ರತ್ಯೇಕಿಸಿದರೆ ರಾಮನು ಪ್ರತಿನಿಧಿಸುವ ಹೊಸ ಮೌಲ್ಯಗಳು ರೂಪುಗೊಳ್ಳುವುದಕ್ಕೆ ಕಾರಣವಾಗುತ್ತಾಳೆ. ಲಚ್ಚನಿಂದಾಗಿ ಅವಳ ಜೀವನ ಬರಡುಗೊಂಡು ಜಟಿಲವಾಗುತ್ತದೆ. ಅನೇಕ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಒಬ್ಬೊಂಟಿಯಾಗಿ ಹೋರಾಡುವ ಧೈರ್ಯ, ಶ್ರದ್ಧೆ, ಅನುಭವ ಇವಳಲ್ಲಿ ವಿಲಕ್ಷಣವಾದ ಅರ್ಥವನ್ನು ಪಡೆಯುತ್ತವೆ. ಅವಳ ವ್ಯಕ್ತಿತ್ವ ಮತ್ತು ಸಾಧನೆ ಉಳಿದವರಿಗೆ ಸ್ಫೂರ್ತಿದಾಯಕವಾಗುತ್ತದೆ. ತಮ್ಮ ಗಂಡ ಲಚ್ಚ ತನ್ನನ್ನು ಪ್ರೀತಿಯಿಂದ ಕರುಣೆಯಿಂದ ನೋಡಿಕೊಳ್ಳದಿದ್ದರೂ ಅವನನ್ನು ಗಂಡನೆಂದೇ ಭಾವಿಸಿ ಮಾನವೀಯ ಅಂತಃಕರಣದಲ್ಲಿ ಬೆಳಗಿಸುತ್ತಾಳೆ.

ತನ್ನ ಮಾವನ ಮನೆಯ ಬಗ್ಗೆ ಗೌರವ ತಾಳಿ ಪಾರೋತಿ ಸರಸೋತಿಯರ ಒಡನಾಟದೊಂದಿಗೆ ಹೊಣೆಹೊತ್ತುಕೊಳ್ಳುತ್ತಾಳೆ. ಸರಸೋತಿಯ ಕೊನೆಗಳಿಗೆಯ 'ಕಾಶಿ'

ಆಸೆಯನ್ನು ತೀರಿಸುತ್ತಾಳೆ. ತನ್ನ ಅತ್ತೆ ಸತ್ಯಭಾಮೆಯ ಕೊಂಕು ನುಡಿಗಳನ್ನು ಪರೋಕ್ಷವಾಗಿ ತಿದ್ದುತ್ತಾಳೆ. ತನ್ನ ತಂದೆ ಚಿಕ್ಕಪ್ಪ ಮತ್ತು ಸಹೋದರನಿಗೆ ಪ್ರೀತಿ ಮಾನವೀಯ ಮೂರ್ತಿಯಾಗಿ ಗೋಚರಿಸುತ್ತಾಳೆ. ತನ್ನ ಗಂಡನ ರೋಗ ಗೊತ್ತಿದ್ದರೂ ಅವನು ಕೊಡುವ ಹಿಂಸೆಯನ್ನು ತಾಳಿಕೊಂಡು, ಅವನ ಆಸೆಯನ್ನು ಪೂರೈಸುತ್ತಾಳೆ. ನಾಗವೇಣಿ ಮನಸ್ಸು ಪಟ್ಟರೆ ಪಿಟೀಲನ್ನು ನುಡಿಸುತ್ತಾಳೆ. ಮಣ್ಣಿನ ಕೆಲಸಗಳನ್ನು ಮಾಡುತ್ತಾಳೆ. 'ಇಂತಹ ಸಾಕಾರಮೂರ್ತಿ ತನ್ನ ಮಗನಿಗೆ ಬೆನ್ನೆಲುಬಾಗಿ ನಿಂತು' ಕಡಲಿನ ಸೋನೆಯೊಂದಿಗೆ ಜೀವನವನ್ನು ರೂಪಿಸುತ್ತಾಳೆ.

ರಾಮ ಮೂರನೇ ತಲೆಮಾರಿನ ಆಧುನಿಕತೆಯ ಪ್ರತಿನಿಧಿಯಾಗಿ ಗೋಚರಿಸುತ್ತಾನೆ. ರಾಮುನ ಜಗತ್ತು ಕಾದಂಬರಿಯ ಉಳಿದೆಲ್ಲ ಮುಖ್ಯ ಪಾತ್ರಗಳ ಜಗತ್ತಿಗಿಂತ ವಿಶಾಲವಾದದ್ದು. ಆಗಾಗ ಅವನ ಆಯ್ಕೆಯ ಪ್ರಶ್ನೆಗಳು ಸಹ ಹೆಚ್ಚು ಸಂಕೀರ್ಣವಾಗಿವೆ. ತನ್ನ ಅಜ್ಜರಾಮು ಐತಾಳರಷ್ಟು ಗಟ್ಟಿ ತನವೂ ಇಲ್ಲ ಲಚ್ಚನಲ್ಲಿರುವ ಕೆಡುಕಿನ ದೌರ್ಬಲ್ಯಗಳೂ ಇಲ್ಲ. ರಾಮನಿಗೆ ತನ್ನ ಜೀವನದ ಬದಲಾವಣೆಯ ಕಾಲಘಟ್ಟದಲ್ಲಿ ಬೇರೆ ರೀತಿಯೇ ಆಲೋಚಿಸಬೇಕಾಗುತ್ತದೆ. ಯಾಕೆಂದರೆ ಲಚ್ಚನ ಮೇಲೆ ಅನ್ಯ ಸಂಸ್ಕೃತಿಯೊಂದು ಸಮಸ್ಯೆಗಳನ್ನೇ ಒಡ್ಡುವ ಎದುರಿಸುವ ಸಂಘರ್ಷವನ್ನು ಕಾಣುತ್ತೇವೆ. ಇದಕ್ಕಾಗಿಯೇ ಬಹುಮುಖ ಪ್ರತಿಭೆಯನ್ನು ತನ್ನ ಉದ್ಯೋಗ ನೆಪದಿಂದ ರೂಢಿಸಿಕೊಳ್ಳುತ್ತಾನೆ.

ಅವನಲ್ಲಿ ಪ್ರಾಮಾಣಿಕತೆ, ನಿಷ್ಠುರತೆ ಮತ್ತು ಗಂಭೀರತೆಗಳು ಮನೆ ಮಾಡಿವೆ. ಆಧುನಿಕತೆಯೂ ಇವನಲ್ಲಿ ರಾಷ್ಟ್ರೀಯ ಜಾಗೃತಿಯನ್ನು ಉಂಟುಮಾಡಿ ಗಾಂಧೀಜಿಯ ಉಪ್ಪಿನ ಸತ್ಯಾಗ್ರಹದಲ್ಲಿ ಪಾಲ್ಗೊಳ್ಳುವಂತೆ ಮಾಡುತ್ತದೆ. ಮಾನವೀಯ ಮೌಲ್ಯಗಳು ಇವನಲ್ಲಿ ಗಟ್ಟಿಯಾಗಿ ಬೇರೂರಿರುವುದರಿಂದಲ್ಲೆ ಹೋಟೆಲಿಗೆ ಬರುತ್ತಿದ್ದಂತಹ ತನ್ನ ಅಪ್ಪನ ಊಟದ ಸಾಲವನ್ನು ಇವನೇ ತೀರಿಸುತ್ತಾನೆ. ಇವನು ತಾಯಿಯ ಮೇಲಿಟ್ಟ ಪ್ರೀತಿ ಅಪಾರ. ಅದಕ್ಕಾಗಿಯೇ ಅವನು ಚಳುವಳಿಯ ನಂತರ ತನ್ನ ತಾಯಿಯ ಮುಂದೆ ಪಶ್ಚಾತ್ತಾಪದಿಂದ ಕಣ್ಣೀರು ಸುರಿಸುತ್ತಾನೆ.

ರಾಮ ಹೋಟೆಲಿನಲ್ಲೂ ಕೆಲಸ ಮಾಡುವನು. ಶಾಲೆಯಲ್ಲಿ ಮಾಸ್ತರನಾಗಿಯೂ ಕೆಲಸ ಮಾಡುವನು. ರಾಷ್ಟ್ರೀಯ ಚಳುವಳಿಯಲ್ಲೂ ಭಾಗವಹಿಸುವನು. ಕಲಾಪ್ರಿಯನೂ ಆಗಿದ್ದಾನೆ. ಬಡತನದ ನಿಷ್ಠುರ ಜೀವನವನ್ನು ಉಂಡಿದ್ದಾನೆ. ಉನ್ನತ ಆದರ್ಶಗಳನ್ನು ಇಟ್ಟುಕೊಂಡಿದ್ದಾನೆ. ಅವನು ಕಡಲಿನೊಡನೆ ಮಾತನಾಡಬಲ್ಲ, ಮಣ್ಣಿನ ಕೆಲಸವನ್ನು ಮಾಡಬಲ್ಲ ಮರಳಿ ಮಣ್ಣಿಗೆ ಎನ್ನುವ ಶೀರ್ಷಿಕೆಯ ಇವನಿಂದಲೇ ಬಂದಿರಬಹುದು.

ಕಾದಂಬರಿಯ ಕೊನೆಯ ಭಾಗದ ಬಗ್ಗೆ ಕನ್ನಡ ವಿಮರ್ಶಕರು ಎತ್ತಿರುವ ಪ್ರಶ್ನೆಗಳಿಗೆ ಡಾ. ಜಿ.ಎಸ್.ಅಮೂರರವರು ಕೊಟ್ಟಿರುವ ಉತ್ತರ ಸಮಂಜಸವಾಗಿದೆ.

''ಮರಳಿ ಮಣ್ಣಿಗೆ'' ಯ ಕೊನೆಯ ಭಾಗದಗ ಬಗ್ಗೆ ಒಂದು ರೀತಿಯ ಅಸಮಾಧಾನ ಇದುವರೆಗೆ ಬಂದ ಈ ಕಾದಂಬರಿಯ ವಿಮರ್ಶೆಯ ಒಂದು ಸಾಮಾನ್ಯ ಅಂಶವಾಗಿದೆ. ಆದರೆ ನನ್ನ ದೃಷ್ಟಿಯಲ್ಲಿ ಈ ಭಾಗ ಉಳಿದ ಭಾಗಗಳಷ್ಟೇ ಯಶಸ್ವಿಯಾಗಿದೆ. ವೈಚಾರಿಕವಾಗಿಯಂತೂ ಇಲ್ಲಿ ಕಂಡು ಬರುವ ಸಾಮಾಜಿಕ ಅವಸ್ಥೆ ಕಾರಂತರ ಜೀವನದ ದರ್ಶನದ ಒಂದು ಅವಿಭಾಜ್ಯಅಂಗವಾಗಿದೆ. ಸಾಂಪ್ರದಾಯಿಕ ಮೌಲ್ಯಗಳನ್ನು ಕಳೆದುಕೊಂಡ ಸಮಾಜಸಾಂಕ್ರಾಮಿಕ ಅವಸ್ಥೆಯನ್ನು ದಾಟಿ ಆಧುನಿಕತೆಯನ್ನು ಪಡೆಯುವ ಬಗೆಯನ್ನು ಈ ಭಾಗಬಹು ಮಾರ್ಮಿಕವಾಗಿ ಚಿತ್ರಿಸುತ್ತವೆ. ತುಂಬು ಎಚ್ಚರದಲ್ಲಿ ತನ್ನ ಜೀವನವನ್ನು ರೂಪಿಸಿಕೊಳ್ಳುವ ನಾಗವೇಣಿಅವಳ ಮಡಿಯಾದ ಆತ್ಮಸಾಕ್ಷಿಯಲ್ಲಿ ಬೆಳೆದುಬಂದ ರಾಮ ಈ ಹೊಸ ಸಮಾಜದ ಅತ್ಯಂತ ಯಶಸ್ವಿ ಪ್ರತೀಕಗಳಾಗಿದ್ದಾರೆ''[೨] (ಪು- ೪೫೫)



'ಕಾನೂರು ಹೆಗ್ಗಡಿತಿ'ಯಲ್ಲಿ ಬರುವ ಹೂವಯ್ಯನ ಪಾತ್ರ ಕಾಲಘಟ್ಟದಲ್ಲಿ ವೈಶಿಷ್ಟ್ಯತೆಯಿಂದ ಕೂಡಿದೆ. ಅವನೊಬ್ಬ ಇಂಗ್ಲೀಷ್ ವಿದ್ಯಾಭ್ಯಾಸವನ್ನುಪಡೆದವ ವಿಲಿಯಂ ವರ್ಡ್ಸ್‌ವರ್ತ್, ಬೈರವ್, ಕೀಟ್ಸ್ ಮತ್ತು ಶೇಕ್ಸ್‌ಫಿಯರ್ ಕಾವ್ಯಗಳನ್ನು ಓದಬಲ್ಲವ. ರಾಮಾಯಣ ಭಾರತದಲ್ಲಿ ಆಸಕ್ತಿಯುಳ್ಳವ ಇವನೊಬ್ಬ ವಾಸ್ತವವಾದಿ ಜೀವಿಯಲ್ಲ. ಆದರ್ಶ ಜೀವಿ. ಇವನ ಆದರ್ಶ ಮೂಲಭೂತವಾಗಿ ವಿರೋಧಿಯಾಗಿಲ್ಲ. ಅಂದರೆ ಭೂಮಾಲಿಕ ವರ್ಗದ ಹಿತಾಸಕ್ತಿಗಳ ಜಗತ್ತಿನ ಪ್ರಶ್ನೆಗೆ ಒಳಗಾಗುವುದಿಲ್ಲ. ಹೂವಯ್ಯನ ಆದರ್ಶಗಳು ಅವನ ಆರ್ಥಿಕ ಆಸಕ್ತಿಗಳಿಗೆ ಮಾರಕವಾಗಿಲ್ಲ. ಅವನೊಬ್ಬ ಸಾತ್ವಿಕ ಜಮೀನ್ದಾರ ಅಷ್ಟೇ.

ಈ ಚೌಕಟ್ಟಿನಲ್ಲಿ ಇತರರಿಗಿಂತ ಹೆಚ್ಚು ಸಭ್ಯವಾಗಿ ಸುಂದರವಾಗಿ ಬದುಕುವ ಇಚ್ಛೆ ಅವನದು. ಇದಕ್ಕೆ ಕಾರಣ ಅವನ ಆಧುನಿಕ ವಿದ್ಯಾಭ್ಯಾಸದ ಸಂಸ್ಕಾರವಾಗಿರಬಹುದು. ಪ್ರಕೃತಿಗೆ ಸೂಕ್ಷ್ಮವಾಗಿ ಸ್ಪಂದಿಸಬೇಕೆನ್ನುವ ಮನೋಭಾವದವನು. ಹೀಗಾಗಿ ಹೂವಯ್ಯನ ಕ್ರಿಯೆಗಳು ಮತ್ತು ಅವನ ಚಿಂತನೆಗಳು ವರ್ಗಹಿತಾಸಕ್ತಿಗಳ ಮೂಲಸತ್ವದಿಂದ ಪ್ರಭಾವಿತವಾಗಿವೆ.

ಕಾನೂರು ಹೆಗ್ಗಡಿತಿಯಲ್ಲಿ ಬರುವ ಮತ್ತೊಂದು ಪಾತ್ರ 'ಸೀತೆ' ಫ್ಯೂಡಲ್ ವ್ಯವಸ್ಥೆಯಲ್ಲಿನ ಅಧೀನದಲ್ಲಿದ್ದಂತಹ ವ್ಯಕ್ತಿತ್ವ ಹೂವಯ್ಯನನ್ನು ಕಂಡರೆ ಅವಳಿಗೆ ಬಲು ಪ್ರೀತಿ ಇವಳು ಹೂವಯ್ಯನಿಗಿಂತ ೫ ವರ್ಷ ಚಿಕ್ಕವಳು. ಸದಾ ಹೂವಯ್ಯ ಭಾವನನ್ನೇ ಮದುವೆಯಾಗುತ್ತೇನೆಂದು ಗೋಡೆಯ ಮೇಲೆ ಬರೆದಿದ್ದಳು. ಬೆನ್ನು ನೋವಿನಿಂದ ನರಳುತ್ತಿದ್ದ ಹೂವಯ್ಯ ಗೋಡೆ ಮೇಲಿದ್ದ ಸೀತೆಯ ಬರಹವನ್ನು ಕಂಡು ಅವರಿಬ್ಬರ 'ಗಂಡ-ಹೆಂಡತಿ ಆಟದ ಕನಸಿಗೆ' ಮರಳುತ್ತಾನೆ.

ಸೀತೆ ಮುಗ್ಧಳು. ನೇರವಾಗಿ ಪ್ರತಿಭಟಿಸದಿದ್ದರೂ ಪರೋಕ್ಷವಾಗಿ ಪ್ರತಿಭಟನಾಕಾರಳು. ಸೀತೆಯನ್ನು ರಾಮಯ್ಯನಿಗೆ ಕೊಟ್ಟು ಮದುವೆ ಮಾಡಲು ತನ್ನ ಜಾಗೃತ ಮನಸ್ಸಿನಿಂದಲ್ಲದ ಪ್ರವೃತ್ತಿಯನ್ನು ಮಾನಸಿಕ ಕಾಯಿಲೆಯಿಂದ ವಿರೋಧಿಸುತ್ತಾಳೆ. ಸೀತೆಯ ಭಾವನೆಗಳಿಂದ ದೂರಾದ ಹೂವಯ್ಯ ಸನ್ಯಾಸಿಯಾಗಲು ಬಯಸುತ್ತಾನೆ. ರಾಮಯ್ಯ ಸತ್ತ ನಂತರ ಹೂವಯ್ಯನ ಬಳಿ ಇರುತ್ತಾಳೆ.

ಕಾನೂರು ಹೆಗ್ಗಡಿತಿಯಲ್ಲಿ ಬರುವ ಸುಬ್ಬಮ್ಮನ ಪಾತ್ರ ಕಾಲಘಟ್ಟದಲ್ಲಿ ವೈಶಿಷ್ಟ್ಯತೆಯಿಂದ ಕೂಡಿದೆ. ಸುಬ್ಬಮ್ಮ ಒರಟು ಪ್ರದೇಶದ ನೆಲ್ಲುಹಳ್ಳಿಯವಳು. ಹೀಗಾಗಿ ಇವಳನಡತೆಯು ಒರಟುತನದಿಂದ ಕೂಡಿರುತ್ತವೆ. ಚಂದ್ರಯ್ಯಗೌಡರಿಗೆ ಮೂರನೇ ಹೆಂಡಿತಯಾದಾಗ ಕಾನೂರೇ ಇವಳಿಗೆ ನವೀನ.

ಚಂದ್ರೇಗೌಡರು ಸುಬ್ಬಮ್ಮನ ಮನೆಗೆ ಹೆಣ್ಣು ಕೇಳಲು ಬಂದಾಗ ಸುಬ್ಬಮ್ಮ ತನ್ನನ್ನು ಹೂವಯ್ಯನಿಗೆ ಕೇಳಲು ಬಂದಿದ್ದಾರೆ ಎಂದು ಭಾವಿಸಿದ್ದಳು. ಆದರೆ ನೈಜಸಂಗತಿ ತಿಳಿದ ಮೇಲೆ ಆಕೆಗೆ ಹತಾಶೆಯಾದರೂ ಹೆಜ್ಜೇನೂ ವ್ಯಸನ ಬಿಡಲಿಲ್ಲ. ಸಾಧಾರಣ ಜೀವನ ಕ್ರಮದಂತೆ ಯಾವನಾದರೊಬ್ಬ ಬಡರೈತನಕೈ ಹಿಡಿದು ದುಡಿಮೆಯಿಂದ ಜೀವನಯಾಚನೆ ಮಾಡಬೇಕಾಗಿತ್ತು. ಕಾನೂರಿನಂತಹ ದೊಡ್ಡ ಮನೆಗೆ ಯಜಮಾನರಾಗಿ ಗಣ್ಯರಾಗಿದ್ದ ಚಂದ್ರಯ್ಯ ಗೌಡರ ಕೈ ಹಿಡಿಯುವುದು ಹೆಗ್ಗಡತಿಯಾಗುವುದು ಒದು ಮಹಾ ಸುಕೃತವೆಂದೇ ಭಾವಿಸಿ ಸಂತುಷ್ಟಳಾದಳು.

ಕಾನೂರು ಹೆಗ್ಗಡತಿಯಲ್ಲಿ ಬರುವ ಮತ್ತೊಂದು ಕೇಂದ್ರ ಮತ್ತು ಕಾನೂರಿನ ಚಂದ್ರಯ್ಯಗೌಡರದು. ಕಾನೂರು ಮನೆತನದ ಯಜಮಾನ ಅಣ್ಣ ಸುಬ್ಬಯ್ಯಗೌಡರು ಗತಿಸಿದ ಮೇಲೆ ಈತನೇ ಮನೆಯ ಯಜಮಾನನಾಗಿ ಹೊಣೆಯೊತ್ತನು. ಅಣ್ಣನಿಗೂ

ಇವನಿಗೂ ಮನಸ್ತಾಪವಿತ್ತು. ಅದಕ್ಕಾಗಿಯೇ ಅತ್ತಿಗೆ ನಾಗಮ್ಮ ''ನನ್ನ ಗಂಡನನ್ನು ಭೂತನಿಗೆ ಕೈ ಮುಗಿದು ಮುಗಿಸಿಬಿಟ್ಟನು'' ಎನ್ನುವ ಆತಂಕ ಭೀತಿ ಅವಳದ್ದಾಗಿತ್ತು.

ವಾಸ್ತವವಾಗಿ ಸುಬ್ಬಯ್ಯ ಗೌಡರು ಸತ್ತದು ರೇಷ್ಮೆ ರೋಗದಿಂದ ಚಂದ್ರಯ್ಯಗೌಡರಲ್ಲಿ ಅನೇಕ ಆಳುಗಳಿದ್ದರೂ, ಅವರಲ್ಲಿ ಬೇಲರ ಬೈರನೂ ಒಬ್ಬನು. ಕಳ್ಳನ್ನು ಕುಡಿಯುವುದಿಲ್ಲವೆಂದು ಹೇಳಿ ಪ್ರಮಾಣ ಮಾಡಿ ಕುಡಿದೇ ಭಾಷಣ ಮಾಡಿದುಂಟು. ಒರಟನ ಸುಬ್ಬಿ ಅವನ ಮೂರನೇ ಹೆಂಡತಿ. ಎರಡನೇ ಹೆಂಡತಿ ಮಗನೇ ರಾಮಯ್ಯ. ಚಂದ್ರಯ್ಯಗೌಡರಿಗೆ ಹೂವಯ್ಯನನ್ನು ಕಂಡರೆ ಹೆದರಿಕೆ ಇತ್ತು. ವೆಂಕಪ್ಪಯ್ಯ ಜೋಯಿಸರು ಯಂತ್ರ ಮಂತ್ರ ಭೂತರಾಧಾನೆಯ ಗುರು. ಚಂದ್ರಯ್ಯಗೌಡನ ಮುಂಗೋಪದಿಂದಾಗಿ ಕಾನೂರು ಮನತನವೇ ಅಲ್ಲೋಲಕಲ್ಲೋಲವಾಯಿತು. ಇವನೊಬ್ಬ ಕ್ರೂರಿಯೂ ಹೌದು. ಲಂಪಟನೂ ಹೌದು.

'ಗ್ರಾಮಾಯಣ' ಕಾದಂಬರಿಯಲ್ಲಿ ಯಾವೊಂದು ಪಾತ್ರಗಳು ಮುಖ್ಯವಾಗಿರದಿದ್ದರೂ ಕೆಲವು ಪಾತ್ರಗಳು ಕೇಂದ್ರ ಪಾತ್ರಗಳಾಗಿ ಗೋಚರಿಸುತ್ತವೆ. ಪಾದಳ್ಳಿಯ ಸಂಸ್ಕೃತಿಯ ಏಳು-ಬೀಳಿನ ಸ್ಥಿತಿಗತಿಗಳ ನಾಯಕನಾಗಿ ಗೋಚರಿಸುತ್ತಾನೆ ಪಡದಯ್ಯ ಪಾದಳ್ಳಿಯಲ್ಲಿರುವ ವಾಡೆಯಸ್ವಾಮೀಜಿ. ಜನಸಾಮಾನ್ಯರಿಂದ ಹಿಡಿದು ಊರಿನಲ್ಲಿರುವ ಹಿರಿಯರವರೆಗೂ ಇವನನ್ನು ಕಂಡರೆ ಭಯ. ಮತ್ತು ಆತಂಕ. ಬಾಬಸಾಹಾಬನಿಗೆ ಚಿಮಣಾಳನ್ನು ಒಲಿಸಿ ಕೊಡುತ್ತೇನೆಂದು ಹೇಳಿ ಅವಳ ಮೇಲೆ ಅತ್ಯಾಚಾರವೆಸಗುತ್ತಾನೆ. ಇದರ ಪರಿಣಾಮ ಪಾದಳ್ಳಿಯ ಪವಿತ್ರತೆಗೆ ಅನೈತಿಕತೆಯ ಧಕ್ಕೆ ಹೊಡೆದು ನಾಶದ ಮುನ್ಸೂಚನೆಗಳಿಗೆ ಕಾರಣವಾಗುತ್ತದೆ. ಪಡದಯ್ಯನ ಅಂತರಂಗ ಎಲ್ಲಾ ತೆರೆಯುವುದಿಲ್ಲ ಕಾಲರಾ ಬಂದಾಗ ಊರಿಂದ ಪರಾರಿಯಾಗುತ್ತಾನೆ. ಪ್ಲೇಗ್ ಬಂದಾಗ ತಣ್ಣನೆ ಊರನ್ನು ಬಿಟ್ಟು ಹೋಗುತ್ತಾನೆ. ಹೀನಕಾರ್ಯಗಳಿಗೆ ಕೆಡುಕಿಗೆ ಸಂಕೇತವಾಗುತ್ತಾನೆ.

ಚಿಮಣ ಶಿಲೆದಾರ ನಾನಾನ ಮಗಳು. ಇವಳ ವ್ಯಕ್ತಿತ್ವ ಅಪರಂಜಿಯಂತದ್ದು ಚಿಕ್ಕಂದಿನಿಂದಲ್ಲೇ ತಾಯಿಯನ್ನು ಕಳೆದುಕೊಂಡ ಚಿಮಣ ನಾನಾನ ಒಲುಮೆಯಲ್ಲೇ ಬೆಳೆಯುತ್ತಾಳೆ. ಶಿಲೆದಾರ ನಾನಾ ಮಗಳು ಯೌವನಕ್ಕೆ ಕಾಲಿಟ್ಟಳೆಂದು ತಿಳಿದು ಗಂಡನ್ನು ಹುಡುಕಲು ಕೊಲ್ಲಾಪುರಕ್ಕೆ ಹೋಗುತ್ತಾನೆ. ಹೋಗುವ ಮುನ್ನ ಪುತಳೀಬಾಯಿಯ ರಕ್ಷಣೆಯಲ್ಲಿ ಒಪ್ಪಿಸುತ್ತಾನೆ. ಚಿಮಣಾಳ ಬಾಳು ಪಡದಯ್ಯನ 'ಹದ್ದಿನ ಕಣ್ಣಿಗೆ' ಬಲಿಯಾಗುತ್ತದೆ. ಕಾದಂಬರಿಯುದ್ದಕ್ಕೂ ಇವಳ ಪಾತ್ರ ಜೀವಂತವಾಗಿದೆ.

ಬಾಳಾಚಾರ್ಯ ಗ್ರಾಮಾಯಣ ಕಾದಂಬರಿಯ ಮತ್ತೊಂದು ಕೇಂದ್ರ ಪಾತ್ರ. ಹಿಂದೂಪುರ ಸಂಸ್ಥಾನದ ರಾಜ ಪುರೋಹಿತ ಪಾವಳಿಯ ಕಷ್ಟ ಸುಖ ಗಳಿಗೆ ಸ್ಪಂದಿಸುವ ಜೀವಂತ ವ್ಯಕ್ತಿ. ಇವನಲ್ಲಿ ನೈತಿಕ ಮೌಲ್ಯಗಳು ಬೇರೂರಿದ್ದು ೬೦ ವರ್ಷಗಳ ಪಾದಳ್ಳಿಯ ಇತಿಹಾಸವನ್ನು ಏಕಾಂಗಿಯಾಗಿ ಅವಲೋಕಿಸುತ್ತಾನೆ. ಪಾದಳ್ಳಿಯಲ್ಲಿ ಉಂಟಾದ ಅವನತಿಯನ್ನು ಕಂಡು ಮರುಗುತ್ತಾನೆ. ಆಹಳ್ಳಿಯಲ್ಲಿ ಬರುವ ರೋಗ-ರುಜಿನಗಳು ಕಾಲರ-ಪ್ಲೇಗುಗಳ ಚಿಮಣಾಳ, ದಾನವ್ವನ ಬದುಕಿನ ಬರ್ಬರತೆ ತನ್ನ ತಮ್ಮಂದಿರ ದುಶ್ಚಟದ ಗೋಳು, ಊರಿನ ಪವಿತ್ರತೆಯ ಬಗ್ಗೆ ಸುಸಂಸ್ಕೃತವಾಗಿ ಚಿಂತಿಸುತ್ತಾನೆ. ಶಂಕರಪ್ಪ ಗೌಡರ ರಾಜಕೀಯ ಕುತಂತ್ರತೆ ಬರಗಾಲ ಬಂದಾಗ ಪಡದಯ್ಯ ಮತ್ತು ಬಾಬಾ ಸಾಹೇಬ ಇಬ್ಬರೂ ಸೇರಿ ಕಾಳುಗಳನ್ನು ಕಳ್ಳತನ ಮಾಡಿಸುವಪರಿಯನ್ನು ಕಂಡು ಚಿಂತೆಗೀಡಾಗುತ್ತಾನೆ. ಕಾದಂಬರಿಯುದ್ದಕ್ಕೂ ಪ್ರತಿಯೊಂದು ವಿಚಾರವನ್ನು ತನ್ನ ತೀಕ್ಷ್ಣತೆಗೆ ಒಳಪಡಿಸಿ ವಿಶ್ಲೇಷಿಸುವ ವ್ಯಕ್ತಿ ಮಾನವ ಮೂರ್ತಿ ಬಾಳಾಚಾರ್ಯ ಆದರೆ ಅವನಲ್ಲಿದ್ದ ಮೌಲ್ಯದ ಬೇರುಗಳು ದುಶ್ಚಟದ ಬೇರುಗಳನ್ನು ಮುರಿಯಲಾರದೆನ್ನುವುದು ದುರಂತವೇ ಸರಿ.!

ಯಾವೊಂದು ಕೇಂದ್ರಪಾತ್ರವು ರೂಪಿತಗೊಳ್ಳುವುದಕ್ಕೆ ಆಯಾಯ ಕಾಲಘಟ್ಟದಲ್ಲಿರುವ ಆಯಾಯ ಸಂಸ್ಕೃತಿಯ ಬಲಿಷ್ಟ ಬೇರುಗಳು ಆಂತರೀಕವಾಗಿ ಇಳಿ ಬಿಟ್ಟಿರುವುದೇ ಪ್ರಮುಖ ಕಾರಣವಾಗಿರುತ್ತದೆ. ಈ ಅಧ್ಯಾಯದಲ್ಲಿ ಕೇಂದ್ರಪಾತ್ರಗಳನ್ನು ರೂಪಿಸುವ ಕಾಲಘಟ್ಟದ ವೈಶಿಷ್ಟ್ಯತೆ ಏನು ಎಂಬುದನ್ನುಕಾದಂಬರಿಯ ಪಾತ್ರಗಳ ಮೂಲಕ ಸಾಂಸ್ಕೃತಿಕವಾಗಿ ಚರ್ಚಿಸಲು ಪ್ರಯತ್ನಿಸಿದ್ದೇನೆ.

## ಅಡಿಟಿಪ್ಪಣಿ

೧. ಜಿ.ಎಸ್. ಶಿವರುದ್ರಪ್ಪ, 'ಕಾದಂಬರಿಕಾರರಾಗಿ ಕಾರಂತ', ಬೆಂಗಳೂರು ಕನ್ನಡ ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯ, ೧೯೮೩, ಪು-೧೭೧-೧೭೨.

೨. ಕು.ಶಿ. ಹರಿದಾಸಭಟ್ಟ (ಸಂ.), 'ಕಾರಂತ ಪ್ರಪಂಚ' ಅಭಿನಂದನ ಗ್ರಂಥ, ಗೀತಾಬುಕ್‌ಹೌಸ್, ಮೈಸೂರು. ೧೯೬೯, ಪು-೪೫೪.

# ಅಧ್ಯಾಯ - ೫

## ಜೀವನದ ನೈತಿಕ ಮೌಲ್ಯಗಳ ಪ್ರತಿಪಾದನೆ ಮತ್ತು ವಿನಾಶ

# ಅಧ್ಯಾಯ - ೫

## ಜೀವನದ ನೈತಿಕ ಮೌಲ್ಯಗಳ ಪ್ರತಿಪಾದನೆ ಮತ್ತು ವಿನಾಶ

ಯಾವುದೇ ಒಂದು ಸಂಸ್ಕೃತಿ ಪರಂಪರೆಯು ಆಯಾ ಭೌಗೋಳಿಕ ಪರಿಸರಕ್ಕೆ ತಕ್ಕಂತೆ ಜೀವನದ ನೈತಿಕ ಮೌಲ್ಯಗಳನ್ನು ಹೊಂದಿರುತ್ತದೆ. ಈ ಮೌಲ್ಯಗಳು ಆಯಾಯ ಜನಾಂಗದ ಬದುಕಿನ ಅಸ್ತಿತ್ವವನ್ನು ಉಳಿಸುವ, ಬೆಳೆಸುವ ವಿಚಾರ ಮಾಡುವ ಆಲೋಚಿಸುವ, ವಿಮರ್ಶಿಸುವ ಬಹುಮುಖ ಪ್ರತಿಭೆಯನ್ನು ರೂಪಿಸುವ, ಅಂತರ್‌ಮುಖವಾಗಿ ಪುನರ್ ಸೃಷ್ಟಿಸುವ ಕಾರ್ಯವನ್ನು ನೈತಿಕ ಮೌಲ್ಯಗಳು ಪ್ರತಿಪಾದಿಸುತ್ತಿರುತ್ತವೆ. ಈ ಮೌಲ್ಯಗಳೇ ವಿನಾಶಕ್ಕೂ ಸಹ ಎಡೆ ಮಾಡಿಕೊಡುತ್ತದೆ.

ಯಾವುದನ್ನು ನಾವು ಕೆಟ್ಟದ್ದು ಎನ್ನುತ್ತೇವೆಯೋ ಆ ಪರಿಕಲ್ಪನೆ ಆಯಾಯ ಪರಿಸರದಲ್ಲಿ ಅಂತರಮುಖವಾಗಿರುತ್ತದೆ. ಒಳ್ಳೆಯದು ಎನ್ನುವ ಪರಿಜ್ಞಾನ ಒಡಮೂಡಿದೊಡನೆ ಕೆಟ್ಟ ಪರಿಕಲ್ಪನೆ ಮುಖಾಮುಖಿಯಾಗಿ ಸಂಘರ್ಷಕ್ಕೆ ಎಡೆ ಮಾಡಿಕೊಡುತ್ತದೆ. ಈ ಅಂತರ್‌ಮುಖತೆಯ ಒಳಜಗಳಾಟದ ಪರಿಣಾಮವೇ ನಾಶ ಮತ್ತು ವಿನಾಶದ ಪ್ರಶ್ನೆ ಏಳಲು ಶುರುವಾಗುತ್ತದೆ.

ಕಾರಂತರು ದೈನಂದಿನ ಜೀವನದ ಅಸಂಖ್ಯ ವಿವರಗಳಲ್ಲೇ ತಮ್ಮ ಅನುಭವವನ್ನು ನೈತಿಕ ಪ್ರಜ್ಞೆಗಳ ಮೂಲಕ ನಿಷ್ಠುರವಾಗಿ ಶೋಧಿಸಿಕೊಳ್ಳುತ್ತಾರೆ. ಹಾಗಾಗಿ ಮೂರ್ತಗೊಳ್ಳುವ ಬಹಿರಂಗ ನಡವಳಿಕೆಗಳು ಅವರಿಗೆ ತುಂಬ ಮುಖ್ಯವಾಗುತ್ತವೆ. 'ಕಾರಂತರಿಗಿರುವ ಕಾಳಜಿ ಜೀವನದ ಕಾಳಜಿ.'

ಸಾಮಾಜಿಕವಾಗಿ ಅರ್ಥಪೂರ್ಣವಾಗುವುದುಎಂದರೆ ಜೀವನಪರವಾದ ಒಳ್ಳೆಯ ಜೀವನದ ಎಲ್ಲರಿಗೂ ಅರ್ಥಪೂಣವಾದ ಮೌಲ್ಯಗಳನ್ನು ಕೊನೆಯ ಪಕ್ಷ ಸಾಂಕೇತಿಕವಾಗಿಯಾದರೂ ಹೊಳೆಯಿಸುವಂತದ್ದು. ಕಾರಂತರು ಯಥಾಸ್ಥಿತಿವಾದಿಗಳಲ್ಲ. ಆದರೆ ಬದಲಾವಣೆಯ ಕಷ್ಟಗಳನ್ನು ಅರಿತವರು. ಆದ್ದರಿಂದಲೇ ಕಾರಂತರು ಈ ವೈವಿಧ್ಯಮಯ ಬದುಕಿಗೆ ಸಾರಾಸಗಟಾಗಿ ಸ್ಪಂಧಿಸುವುದಿಲ್ಲ.

'ಬಾಳ್ವೆಯ ಬೆಳಕಿನಲ್ಲಿ' ಕಾರಂತರು ಬರೆಯುತ್ತಾರೆ.' 'ನೀತಿ'ಎಂಬುದು ವ್ಯಕ್ತಿಯ ನಡತೆಯನ್ನು ಅಳೆಯುವ ಒಂದು ನೋಟ ವ್ಯಕ್ತಿಯು ತನ್ನ ಸಮೀಪದ ಮತ್ತು ದೂರದ

ಮನುಷ್ಯ ಕುಟುಂಬದೊಡನೆ ವರ್ತಿಸುವ ರೀತಿ ಹೇಗಿರಬಹುದೆನ್ನುವ ಅಳತೆ. ಕೆಲವು ಬಾರಿ ಮನುಷ್ಯ ವ್ಯಕ್ತಿಯು ಇತರ ಮನುಷ್ಯರೊಡನೆ ವರ್ತಿಸುವ ಬಗೆಯನ್ನು ಮಾತ್ರವಲ್ಲ. ಇತರ ಜೀವಿಗಳೊಡನೆ ಇರಿಸಿಕೊಳ್ಳುವ ಸಂಬಂಧವನ್ನು ಅದು ಸೂಚಿಸುತ್ತದೆ. ಅಂಥ 'ನೀತಿ' ಎಂಬುದು ಗುಂಪು ಗುಂಪುಗಳಲ್ಲಿ ಭಿನ್ನವಾಗಿದೆ. ಕಾಲ ಕಾಲಗಳಲ್ಲಿ ಭಿನ್ನವಾಗಿದೆ. ಒಂದು ಕಾಲದ ಒಂದು ಜನ ಸ ಮುದಾಯದಲ್ಲಿ 'ಅನೀತಿ' ಎಂದು ಪರಿಗಣಿಸಲ್ಪಡಬಹುದು... ಹೀಗೆ ಮನುಷ್ಯನು ಮನುಷ್ಯರೊಡನೆ ನಡೆಯಿಸುವ ಅನೇಕಾನೇಕ ವ್ಯವಹಾರಗಳು, ಆಯಾಯ ಕಾಲದ ದೃಷ್ಟಿಗಳಿಂದ ನೀತಿ, ಅನೀತಿ - ಎಂದು ತಿಳಿಯಲ್ಪಡುತ್ತದೆ. ಅನೀತಿಗಳಲ್ಲೂ ಎಲ್ಲಾ ಬಗೆಯವು ಒಂದೇ ತೆರದ ಕನಿಷ್ಟತೆಯನ್ನು, ನಿಂದ್ಯತೆಯನ್ನೂ ಪಡೆದಿಲ್ಲ....' ನೀತಿ'ಯ ಬಗೆ ಸ್ವತಂತ್ರವಾದುದೊಂದು ನೆಲೆಗಟ್ಟಿನ ಮೇಲೆ ನಿಂತಿಲ್ಲ. ಯಾವ ಕಾಲಕ್ಕೂ 'ಇದುನೀತಿ 'ಅದು ಅನೀತಿ' ಎನ್ನುವ ತಳಹದಿ ಅದಕ್ಕಿಲ್ಲ. ಏಕೆಂದರೆ - ಮನುಷ್ಯನ ನೀತಿಶಾಸ್ತ್ರ ಅವನ ಹಿನ್ನೆಲೆಯ ಮೇಲೆಹೊಂದಿದೆ. ಅದರಂತೆ ಆಯಾಯ। ಕಾಲದ ಅವಶ್ಯಕತೆ ಜನಾಭಿಪ್ರಾಯಗಳನೂ ಹೊಂದಿಕೊಂಡಿದೆ. ಪರಂಪರೆಯಿಂದ ಬಂದ ನಂಬಿಕೆಗಳ ಮೇಲಿಂದ ಒಂದು ಗುಂಪಿನವರು ತಮ್ಮ ತಮ್ಮ ನಡವಳಿಗಳನ್ನು ತುಲನೆ ಮಾಡುತ್ತಾರೆ. ಆದರೆ ಈ ಹಿಂದಿನ ನೆಲೆ ಏನೇ ಇರಲಿ ಜನರಲ್ಲಿ ವಿಮರ್ಶೆ ಹೆಚ್ಚಾದರೆ ಇಲ್ಲವೇ ಇನ್ನಾವುದಾದರೂ ಅವಶ್ಯ ಪ್ರಸಂಗ ಬಲವಂತ ಮಾಡಿದರೆ ಈ ನೀತಿಯ ನೋಟ ಬದಲಾಗಬಹುದು''.

ನೀತಿಯ ಬಗ್ಗೆ ಕಾರಂತರ ನಿಲುವುಗಳು ಆರೋಗ್ಯಕರವಾಗಿವೆ. ಕೃತಿ ನಡವಳಿಕೆಗಳನ್ನು ವ್ಯಕ್ತಿಗಳ ಪರಿಸ್ಥಿತಿ ಆವರಣ ಕ್ರಿಯೆ ನಡೆದ ಪ್ರಸಂಗ ವ್ಯಕ್ತಿಯ ಸಂಸ್ಕಾರ ಇವುಗಳ ಮೇಲಿಂದ ಕೂಗಬೇಕು. ವ್ಯಕ್ತಿಯ ಒಂದು ಕೃತಿಯಲ್ಲಿ ಭಾಗಿಯಾಗಲು ಅವನಾಗಿ ಎಷ್ಟು ಕಾರಣ. ಅವನ ಮೇಲೆ ಹೊರೆಯಾಗಿ ಬಂದಿರುವ ಆವರಣ ಎಷ್ಟು ಕಾರಣ ಎಂದು ತೂಗಬೇಕಾಗಿರುವುದು ಅವಶ್ಯಕ ಎಂದು ಹೇಳುತ್ತಾರೆ.

'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿ ರಾಮ ಐತಾಳರು ಶೀನಮಯ್ಯರ ಬಗ್ಗೆ ಯೋಚಿಸುವ ನೈತಿಕ ಪ್ರಜ್ಞೆ ಎಂತಹದು ಎಂದು ಈ ಸಂದರ್ಭದ ಮಾತು ತಿಳಿಸುತ್ತದೆ.

''ಆಸ್ತಿ ಮಾಡುವುದಕ್ಕೂ ಶ್ರಮ ಬೇಡವೇ ? ನಾನು ತನ್ನ ತೋಟಕ್ಕೆ ಲಗ್ತು ಇದೆಯೆಂದು ಪೂಜಾರಿಯ ತೋಟಕೊಂಡೆನೇ ವಿನಾ, ಇನ್ನೊಂದು ಕಡೆಯಲ್ಲಿದ್ದಿದ್ದರೆ ಕೊಳ್ಳುತ್ತಿದ್ದೇನೇ ? ಇವನ ವಹಿವಾಟು ಹಾಗಲ್ಲ. ಇವನಿಗೆ ಈ ಪುಟ್ಟಗದ್ದೆಯ ಸೆರಗಿನಿಂದ

ಒಂದು ಕಾಸಿನ ಪ್ರಯೋಜನವಾದೀತೇ ? ಮೊನ್ನೆ ಮಣ್ಣೂರಿನಲ್ಲಿ ನಾಲ್ಕು ಐದೇ ಐದು ಹಂಗೆ ಗದ್ದೆಗಳನ್ನು ಕೊಂಡಿದ್ದಾನೆ. ಅದರಿಂದ ಇವನಿಗೆ ಸಾಗುವಳಿ ಮಾಡಲು ಬಂದೀತೇ? ನೇಗಿಲು ತಿರುಗಿಸಲು ಜಾಗವಿಲ್ಲದ ಗದ್ದೆಗಳನ್ನು ಕೊಳ್ಳುವುದು ತೀರ್ಪು ಕೊಡಲು ಆದೀತೇ ವಿನಾ ಹಾಕಿದ ಹಣ ಅದರಿಂದ ಹಿಂದೆ ಬರಲಾರದು'' ಎಂದರು. [೧](ಪು. ೧೧೬)

ಶೀನಮಯ್ಯನು ರಾಮ ಐತಾಳರ ಮೇಲೆ ಮತ್ಸರವನ್ನುಂಟು ಮಾಡಿಕೊಂಡು ಯಾವ ಭೂಮಿ ಫಲವತ್ತಾಗಿದೆ. ಯಾವುದನ್ನು ಮಾಡುವುದರಿಂದ ಲಾಭ ಬರುತ್ತದೆ ಎಂಬುದನ್ನು ಯೋಚಿಸದೆ ಹಣವನ್ನು ಪೋಲುಮಾಡುತ್ತಿರುವುದನ್ನು ಕಂಡು ಐತಾಳರು ಗೊಣಗಲು ಪ್ರಾರಂಭಿಸುತ್ತಾರೆ.

ಕಾನೂರು ಹೆಗ್ಗಡತಿಯ ಕಾದಂಬರಿಯಲ್ಲಿ ಬರುವ ಚಂದ್ರಯ್ಯಗೌಡರು ತನ್ನ ಅತ್ತಿಗೆಯ ಮೇಲೆ ಇಟ್ಟಿದ್ದಂತಹ ನಂಬಿಕೆಗಳು, ಆದರಗಳು, ಜೀವನದ ನೈತಿಕ ಮೌಲ್ಯಗಳನ್ನು ಒಳಗೊಂಡು ಮುಂದೆ ಯಾವ ರೀತಿ ವಿನಾಶಕ್ಕೆ ಹಾದಿ ಮಾಡಿಕೊಡುತ್ತದೆ ಎಂದು ಈ ಕೆಳಗಿನ ಮಾತುಗಳು ವ್ಯಕ್ತಪಡಿಸುತ್ತವೆ.

''ಚಂದ್ರಯ್ಯಗೌಡರಿಗೆ ಮೊದಲಿನ ಅವರ ಅಣ್ಣ ಸುಬ್ಬಯ್ಯಗೌಡರು ಮನೆಗೆ ಯಜಮಾನರಾಗಿದ್ದರು. ಸುಬ್ಬಯ್ಯಗೌಡರು ಸಾಯುವಾಗ ಅವರಿಗೂ ಚಂದ್ರಯ್ಯಗೌಡರಿಗೂ ಮನಸ್ಸು ಸರಿಯಿರಲಿಲ್ಲ. ನಾಗಮ್ಮನವರು ತಮ್ಮ ಗಂಡನ ಸಾವಿಗೆ ಚಂದ್ರಯ್ಯಗೌಡರೇ ಕಾರಣರೆಂದು ಎಲ್ಲರೊಂದಿಗೂ ಸಾರುತ್ತಿದ್ದರು. ತನ್ನ ಗಂಡನ ಮೇಲೆ 'ದಯ್ಯಾಮಾಡಿ'ಕೊಂದರೆಂದು ಆಕೆ ನಂಬಿಬಿಟ್ಟಿದ್ದರು. ವಾಸ್ತವಾಂಶ ಅವರು ರೇಷ್ಮೆ ಕಾಯಿಲೆಯಿಂದ ಮೃತರಾಗಿದ್ದರು. ಚಂದ್ರಯ್ಯ ಗೌಡರು ನಾಗಮ್ಮನವರ ಮಾತಿನಲ್ಲಿ ಇತರರಿಗೆ ನಂಬುಗೆಯಾಗುವಂತೆ ವರ್ತಿಸುತ್ತಿದ್ದರು. ಆಕೆಯ ವಿಷಯದಲ್ಲಿ ದ್ವೇಷದಿಂದಲ್ಲದಿದ್ದರೂ ಅನಾದರದಿಂದ ಇರುತ್ತಿದ್ದರು. ನೊಂದೆದೆಯ ನಾಗಮ್ಮನವರಿಗೆ ಅವರ ಒಂದೊಂದು ಅನಾವರಣಯಲ್ಲಿ ಭಯಂಕರ ವೈರದಂತೆ ತೋರುತ್ತಿತ್ತು. ಹೂವಯ್ಯನಿಗೆ ಇದೆಲ್ಲ ಗೊತ್ತಿದ್ದರೂ ಆತನ ಭಾವ ಜೀವಿಯಾಗಿದ್ದುದರಿಂದಲೂ ಆತನ ಭಾವ ಜೀವಿಯಾಗಿದ್ದುದರಿಂದಲೂ ಆತನ ಗಮನವೆಲ್ಲ ವಿದ್ಯಾರ್ಜನೆಯ ಕಡೆಗಿದ್ದುದರಿಂದಲೂ ರಾಮಯ್ಯನ ವಿಶ್ವಾಸದ ಪ್ರಭಾವದಿಂದಲೂ ಯಾವ ಇತ್ಯರ್ಥದ ಕಾರ್ಯಕ್ಕೂ ಕೈ ಹಾಕದೆ ಸುಮ್ಮನಿದ್ದನು.'' [೨](ಪು-೩೪)

ಗ್ರಾಮಾಯಣ ಕಾದಂಬರಿಯಲ್ಲಿ ಪುತಳೀಬಾಯಿಯ ತಮ್ಮ ಬಾಪು ಸಾಹೇಬ ಮದುವೆಯಾಗಿದ್ದರೂ ಸಹ ಚಿಮಣಾಳನ್ನು ನೋಡುವ ವಕ್ರದೃಷ್ಟಿ 'ಮಗಳೆಂದು ಕಾಣು' ಎನ್ನುವ ಪುತಳೀಬಾಯಿಯ ನೈತಿಕತೆಗೆ ವಿರೋಧವಾಗಿರುವುದನ್ನು ಈ ಕೆಳಗಿನ ಮಾತುಗಳು ವ್ಯಕ್ತಪಡಿಸುತ್ತವೆ.

''ಬಾಪೂ, ಹಂಗಲ್ಲಾ ಬೆಳೆದ ಹೆಣ್ಣುಮಕ್ಕಳ ಸಂಬಂಧೀ ಮಾತಡೋದು ನಡತಿ ಅಲ್ಲ. ಚಿಮಣಾ ನನ್ನ ಮಗಳಿದ್ದಾಂಗ. ಹಂಗೆಲ್ಲ ಹುಚ್ಚುಚ್ಚುರ ಮಾತಾಡಿದರ ನನಗೆ ಸರಿಬರಾಕಿಲ್ಲ'' ಎಂದು ನಿಷ್ಠುರವಾಗಿಯೇ ನುಡಿದು ಒಳಗೆ ನಡೆದಳು.

ಬಾಪೂ ಸಾಹೇಬನಿಗೆ ಈ ಮಾತು ಕೇಳಿ ಮರ್ಮಾಘಾತವಾದಂತಾಯಿತು. ಆದರೂ ಸೋಲನ್ನೊಪ್ಪಿಕೊಳ್ಳಲು ಅವನಿಗೆ ಮನಸ್ಸಾಗಲಿಲ್ಲ. 'ಲಗ್ನ ಆಗೋ ಹುಡುಗಿ, ಒಳ್ಳೆದಾಗಲಿ ಅಂತ ಹೇಳಿದೆ. ನಾಯೇನಂತಾ ಆಡಬಾರದ್ದನ್ನು ಆಡಿದ್ನಿ?'' ಎಂದು ತನಗೆ ತಾನೇ ಒಡಗುಟ್ಟಿದ. ಆದರೆ ಅದನ್ನು ಕೇಳಲೂ ಪುತಳಾಬಾಯಿ ಅಲ್ಲಿರಲಿಲ್ಲ. ಬಾಪೂ ಸಾಹೇಬನಿಗೆ ಮತ್ತೆ ಚಿಮಣಾಳ ಬಗ್ಗೆ ಗುಂಗು ಹಿಡಿಯಿತು. ಅಕ್ಕನ ವಿರೋಧದಿಂದಲೋ ಏನೋ ಅದು ಇನ್ನೂ ತೀಕ್ಷ್ಣವಾಗಿತ್ತು. ಆದರೆ ಪುತಳಾಬಾಯಿಯ ರಕ್ಷಣೆಯಲ್ಲಿದ್ದ ಚಿಮಣಾಳ ರೂಪ ಹಾವಿನ ಹೆಡೆಯಲ್ಲಿರುವ ರತ್ನದಂತೆ ಅಪ್ರಾಪ್ಯವಾಗಿತ್ತು. ಉಳಿದ ವಿಷಯಗಳಲ್ಲೆಲ್ಲ ಕೈಲಾಗದವನಾಗಿದ್ದರೂ, ಹೆಣ್ಣಿನ ಬೇಟೆಯಲ್ಲಿ ಮಾತ್ರ ಬಾಪೂ ಸಾಹೇಬ ನಿಷ್ಣಾತನಾಗಿದ್ದ.'' (ಪು- ೧೨).

'ಮರಳಿ ಮಣ್ಣಿಗೆ'ಯ ರಾಮ ಐತಾಳರು ತಮ್ಮದೇ ಆದ ಗ್ರಾಮೀಣ ಸಾಂಸ್ಕೃತಿಕ ಪರಂಪರೆಯ ಮೌಲ್ಯಗಳನ್ನು ಅಳವಡಿಸಿಕೊಂಡು ಪೌರೋಹಿತ್ಯ ಕೆಲಸವನ್ನು ನಿರ್ವಹಿಸುತ್ತಾ ಬದುಕನ್ನು ಸಾಗಿಸುತ್ತಾನೆ.

ತನ್ನ ವ್ಯಕ್ತಿತ್ವದಲ್ಲಿ ಯಜಮಾನಿಕೆಯ ದರ್ಪವಿದ್ದರೂ ತನ್ನ ಕುಟುಂಬದ ಮೇಲೆ ಸಹಾನುಭೂತಿಯನ್ನು ಹೊಂದಿರುತ್ತಾರೆ. ಮನೆಯ ಕೆಲಸದಲ್ಲಿ ಮಾತ್ರವೇ ಅವನು ಪಲಾಯನವಾದಿ ಹೊರತು ಜೀವನದಿಂದಲೇ ಅಲ್ಲ. ತನ್ನಹೆಂಡತಿಗೆ ಮತ್ತು ತಂಗಿಗೆ ಗೊತ್ತಾಗದಂತೆ ವಿವಾಹವನ್ನು ಗೊತ್ತುಮಾಡಿ ಚಪ್ಪರ ಹಾಕಿದ ನಂತರವೇ ತಳಿಯುವಂತೆ ಮಾಡುತ್ತಾನೆ. ಭತ್ತದ ಫಸಲಿನ ಮೊತ್ತದಲ್ಲೂ ಸರಸೋತಿಗೆ ಸುಳ್ಳು ಹೇಳುತ್ತಾನೆ. ಆದರೂ ಇವನಲ್ಲಿ ನೈತಿಕತೆಯ ಪ್ರಜ್ಞೆಯು ಮಬ್ಬಾಗಲಿಲ್ಲ. ತನ್ನ ದ್ವೇಷಿ ಶೀನಮಯ್ಯನು

ಮಾಡುವಂತಹ ಎಷ್ಟೋ ಆಸ್ತಿಯನ್ನು ಕೊಳ್ಳುವ ಶ್ರಮದಲ್ಲಿ ಮತ್ಸರವಿದ್ದರೂ ವಿದೇಶ ಪ್ರಜ್ಞೆಯಿಂದ ನೋಡುತ್ತಾನೆ.

ಶೀನಮಯ್ಯನ ಮಕ್ಕಳು ಬೆಂಗಳೂರಿನ ಹೋಟೆಲಿನಲ್ಲಿ ಹಣ ಸಂಪಾದಿಸಲು ಹೊರಟಾಗ ವಕೀಲನೋ ಮಾಡಬೇಕೆಂದು ಬಯಸಿ ಶಂಕರ ಐತಾಳನ ಸಂಸ್ಕೃತ ವಿದ್ಯಾಭ್ಯಾಸಕ್ಕೆ ಹಾಕದೇ ಇಂಗ್ಲೀಷ್ ವಿದ್ಯಾಭ್ಯಾಸಕ್ಕೆ ಸೇರಿಸುತ್ತಾನೆ.

ರಾಮು ಐತಾಳರ ಮೇಲೆ ಅನ್ಯ ಸಂಸ್ಕೃತಿಯ ಪ್ರಭಾವ ಪರೋಕ್ಷವಾಗಿ ಆಗುತ್ತಿರುವುದನ್ನು ಕಾಣಬಹುದು. ತನ್ನ ತಂಗಿ ಸರಸೋತಿಗೆ ಆಶ್ರಯವನ್ನು ಕೊಟ್ಟು ಅವಳಿಗೆ ನೋವನ್ನುಂಟು ಮಾಡಿದಾಗಲೂ ಕ್ಷಮೆಯಾಚಿಸಿ ಬದುಕುವಂತಹ ವ್ಯಕ್ತಿತ್ವ ಅವನದು. ರಾಮು ಐತಾಳರಲ್ಲಿ ಮಾನವೀಯ ಮೌಲ್ಯಗಳು ಉಸಿರು ಕಟ್ಟಿದ ಉಬ್ಬಿನಂತೆ ಇದ್ದವು. ಇವನ ಹೆಂಡತಿ ಪಾರೋತಿ ಸಾಯುವ ಗಳಿಗೆಯಲ್ಲಿ ನಾನು ಎಷ್ಟೊಂದು ಕಷ್ಟಗಳನ್ನು ಕೊಟ್ಟೆನು. ನನ್ನನ್ನು ಕ್ಷಮಿಸು ಎಂದು ಕಣ್ಣೀರ್ಗರೆದನು.

ರಾಮು ಐತಾಳರ ವ್ಯಕ್ತಿತ್ವದಲ್ಲಿ ಪ್ರಕೃತಿ ಸಂಸ್ಕೃತಿಯೊಂದಿಗೆ ಹೋರಾಡುವ ಒರಟುತನ ಇದೆ. ತನ್ನಲ್ಲಿ ಹಣವಿಲ್ಲವೆಂದುಕೋಡಿಯ ನದಿಯಲ್ಲಿ ಈಜು ಹೊಡೆಯುತ್ತಾ ದಡ ಮುಟ್ಟಿದ್ದೂ ಉಂಟು. ಮಳೆ ಬಿರುಗಾಳಿಗೆ ಹೆದರದೆ ತನ್ನ ಸ್ಥೈರ್ಯವನ್ನು ಉಳಿಸಿಕೊಂಡು ಬಾಳಿದಂತಹ ವ್ಯಕ್ತಿತ್ವ ಅವನದು.

ಸರಸೋತಿ ಮತ್ತು ಪಾರೋತಿಯರ ಜೀವನದ ಮೌಲ್ಯಗಳು ಪರಂಪರೆಯ ಮೌಲ್ಯಗಳೇ ಆಗಿವೆ. ಕಷ್ಟ ಬಂದಾಗ, 'ಓಂ ನಮಃ ಶಿವಾಯ, ದೇವರೇ ನೀನೇ ಗತಿ' ಎನ್ನುವ ರೂಢಿ ಆಚರಣೆಗಳೇ ಅವರಿಗೆ ಸಾಂತ್ವನ ನೀಡುತ್ತಿದ್ದವು. ಕುಟುಂಬ ಪ್ರಪಂಚವೇ ಅವರ ಜೀವನದುದ್ದಕ್ಕೂ ಆಳಿತು. ಪ್ರಾಮಾಣಿಕತೆ ವಿವೇಕ ಪ್ರಜ್ಞೆ ನಿಷ್ಠುರತೆ ಇವೆಲ್ಲವೂ ಸಹ ಮೈಗೂಡಿದ್ದವು. ರಾಮು ಐತಾಳರಿಗಿಂತಲೂ ಸರಸೋತಿ ಪಾರೋತಿಯರಿಬ್ಬರೂ ಕಟ್ಟಿಗೆ ತರುವಲ್ಲಿ ಮಳೆಗಾಳಿಯನ್ನು ನೀರಿನ ಪ್ರವಾಹವನ್ನು ಧೈರ್ಯವಾಗಿ ಎದುರಿಸುತ್ತಿದ್ದರು.

ಸತ್ಯಭಾಮೆಯ ಬದುಕೂ ಸಹ ಈ ಮೌಲ್ಯಗಳಿಂದ ಹೊರತಾಗಿಲ್ಲ. ಸರಸೋತಿಯು ಆಗಾಗ್ಗೆ ರಾಮು ಐತಾಳರಿಗೆ 'ಪುರೋಹಿತ ಕೆಲಸವನ್ನು ಮಾಡುವವರಾರು ? ನಿನ್ನ ಮಗನ ಓದು ಸಾಕು. ಇಲ್ಲಿಗೆ ಕರೆಯಿಸು ಎಂಬ ಮಾತನ್ನು ಹೇಳುತ್ತಿದ್ದಳು.

ಆಧುನಿಕ ವಿದ್ಯಾಭ್ಯಾಸ ಪಡೆದ ಲಚ್ಚ ತನಗೆ ಗೊತ್ತಾಗದ ರೀತಿಯಲ್ಲಿ ಕೆಡುಕಿನ ಮೌಲ್ಯಗಳನ್ನು ವ್ಯಕ್ತಿತ್ವ ಹೇರುವ ಜಾಡ್ಯಗಳನ್ನು ತನ್ನಲ್ಲಿ ಅಳವಡಿಸಿಕೊಂಡಿರುವುದನ್ನು ಕಾಣಬಹುದು. ಕೋಡಿ ಸಂಪ್ರದಾಯಿಕ ಪ್ರದೇಶವಾದರೆ ಉಡುಪಿ ಪಡವನ್ನೂರು, ಮಂಗಳೂರು ಇವು ಆಧುನಿಕ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಪ್ರದೇಶಗಳು.

ಲಚ್ಚ ಓದಿನ ಕಡೆ ಅಷ್ಟಾಗಿ ಗಮನಕೊಡದೇ ಈಗಾಗಲೇ ಅವರಲ್ಲಿರುವ ಕೆಡುಕಿನ ಬೀಜಗಳು, ಚಿಗುರುವುದಕ್ಕೆ ಕಾದಂಬರಿಯುದ್ದಕ್ಕೂ ಅವಕಾಶಗಳಿರುವುದನ್ನು ಕಾಣಬಹುದು. ಪುಸ್ತಕದ ನೆಪ ಇಟ್ಟುಕೊಂಡು ಹೇಗೆ ಹಣವನ್ನು ವಸೂಲಿಮಾಡುತ್ತಿದ್ದ ಎಂಬುದು ಈ ಕೆಳಗಿನ ಮಾತುಗಳು ತಿಳಿಸುತ್ತವೆ.

''ಲಚ್ಚಣ್ಣನು ಮದುವೆಯಿಲ್ಲದೆ ಎರಡನೆಯ ವರ್ಷ. ಕುಂದಾಪುರದಲ್ಲಿ ಕಾಲಿರಿಸಿದನು. ನಾಲ್ಕನೆಯಿಂದ ಆರನೆಯ ಫಾರ್ಮಿನ ತನಕ ಇನ್ನೂ ಮೂರು ವರ್ಷ ಅಲ್ಲಿ ತೀರಿಸಿಕೊಂಡರೆ ಒಂದು ಗಡು ದಾಟಿದಂತಾಯಿತು ಎಂದು ತಂದೆಯ ಆತುರ. ಅವನ ಗಮ್ಮತ್ತು ಯಾವ ತೆರನಾಗಿಯೇ ದೊರೆಯಲಿ. ಹಣ ಮಾತ್ರ ಅದಕ್ಕೆ ವ್ಯಯವಾಗುವುದು ಕಂಡುಬರುತ್ತಿತ್ತು. ಪ್ರತಿ ತಿಂಗಳೂ, ಪ್ರತೀ ವಾರವೂ ಅವನ ಪುಸ್ತಕಗಳ ಪಟ್ಟಿಗಳು ಮುಗಿಯವು. ಆ 'ಫೀಸು' ಈ 'ಫೀಸು'ಗಳ ನೆಪಹೇಳಿ ಮನೆಗೆ ಬಂದು ಸರಸೋತಿಯ ಮೂಲಕ ತಂದೆಯನ್ನು ಮಾತನಾಡಿ ಹಣಸುಲಿಗೆ ಮಾಡುತ್ತಿದ್ದ. ಅತ್ತ ಅಜ್ಜನ ಮನೆಯಿಂದಲೂ ಹಣ ಪಡೆಯುತ್ತಲೇ ಇದ್ದ.'' [೪] (ಪು-೧೬೬).

''ರಾಮ ಐತಾಳರು ಎಂಥ ಇಂಗ್ಲೀಷೋ ಅಪ್ಪ. ತಿಂಗಳಿಗೆ ಊಟ, ಪುಸ್ತಕ ಎಂದು ಹತ್ತೋ ಹದಿನೈದು ರೂಪಾಯಿ ಹೋಗುತ್ತಲೇ ಇದೆ. ವಿದ್ಯೆ ಪೂರಾ ಮುಗಿಯುವಾಗ ಇನ್ನೂ ಎಷ್ಟು ಹಿಡಿಯುತ್ತದೆಯೋ ? ಕಳೆದ ತಿಂಗಳಲ್ಲಿ ಪುಸ್ತಕಕ್ಕೇ ಹತ್ತು ರೂಪಾಯಿ ಒಯ್ದಿದ್ದ' ಎಂದರು.

ಅವರ ಮಾವನು 'ನೀವು ಅಲ್ಲಿಂದಲೂ ಹಣ ಕೊಡುತ್ತೀರಾ ? ನಾನು ಪುಸ್ತಕ. ಸಂಬಳಗಳಿಗೆ ಇಲ್ಲಿಂದಲೇ ಕೊಡುತ್ತಿದ್ದೆನಲ್ಲ'! ಎಂದರು. ಐತಾಳರಿಗೆ ಎದೆ ದಡಲ್ಲೆಂತು. 'ನೀವು ಕೊಡುವುದೇಕೆ.ಕಳೆದ ವರ್ಷದಿಂದ ದೀಪದ ಎಣ್ಣೆಯಿಂದ ಹಿಡಿದು ಪ್ರತಿಯೊಂದಕ್ಕೂ ನಾನು ಕೊಡುತ್ತಿದ್ದೇನಲ್ಲ' ಎಂದರು. ಮಗನು ಈ ತೆರನಾಗಿ ಇಕ್ಕಡೆಗಳಿಂದ ಸುಲಿಗೆ ಮಾಡುತ್ತಿರುವನೆಂದು ಅವರು ತಿಳಿದಿರಲಿಲ್ಲ. ಅತ್ತ ಅಜ್ಜನ

ಮನೆಯವರಿಗೂ ತುಸು ವಿಸ್ಮಯವಾಯಿತು. ಅಪ್ಪನನ್ನು ಕೇಳಿದರೆ ಪೈ ಕೊಡುವುದಿಲ್ಲವೆಂದು ಅಜ್ಜನ ಮನೆಯಲ್ಲಿ ಹಣಕೇಳುತ್ತಿದ್ದ. ಅವನ ವಿಷಯಕ್ಕೆ ಮಾದಪ್ಪನವರೂ ಗಾಬರಿಯಾದರು. ಏನು ಕೆಲಸಕ್ಕೆ ಇಷ್ಟು ಹಣ ಹಾಳು ಮಾಡುತ್ತಾನೆ. ಐತಾಳರು ಒಬ್ಬನ ಕಾಫಿಗಾದರೂ ಎಷ್ಟು ಹಣ ಬೇಕು ? ಪ್ರಾಯಶಃ ಪೋಲಿಗಳ ಕೂಟಕ್ಕೆ ಸಿಕ್ಕಿ, ಎಲ್ಲರನ್ನು ಕಟ್ಟಿಕೊಂಡು ಕಾಫಿ, ಗೀಫಿಗಳ ದರ್ಬಾರನ್ನು ಮಾಡುತ್ತಿರಬೇಕು'ಎಂದು ಊಹಿಸಿದರು.''[೫] (ಪು-೧೬೬).

ತಂದೆ ಮಕ್ಕಳಲ್ಲಿ ನಡೆದ ಪ್ರಥಮ ರಣಾಗ್ರದೇಸೀಯ ಮತ್ತು ಅನ್ಯದೇಸೀಯ ಸಾಂಸ್ಕೃತಿಕತ ಸಂಘರ್ಷವೆನ್ನಬಹುದು. ಅದನ್ನು ಈ ಕೆಳಗಿನ ಮಾತುಗಳಲ್ಲಿ ಕಾಣಬಹುದು.

''ಈಗ ನೋಡುವ ಮಂದರ್ತಿಗೆ ಹೇಗೆ ನೀನು ನಿನ್ನ ಭಾವನೆಗೆ ಒಂದು ಸುದ್ದಿಯನ್ನು ಮುಟ್ಟಿಸು ಎಂದರು. ಐತಾಳರು ಮಂದರ್ತಿಗೆ ಹೋಗಲು ನನಗೆ ದಾರಿ ತಿಳಿಯದು ಎಂದು ಲಚ್ಚ. ಸೂರನನ್ನು ಜೊತೆಗೆ ಕರೆದುಕೊಂಡು ಹೋಗು. ಸೂರನಿಗೆ ಗೊತ್ತಿದೆ ದಾರಿ ಎಂದರು ತಂದೆ. 'ನನಗೆ ನಡೆಯಲಿಕ್ಕೆ ಸಾಧ್ಯವಿಲ್ಲ'ಎಂದನು. ಆತ ಕೂಡಾ ಕುಂದಾಪುರದಿಂದ ಪಡುಮನ್ನೂರಿಗೆ ನಡೆಯುವವನಿಗೆ ಅಲ್ಲಿಂದಲ್ಲಿಗೆ ಹೋಗಲಿಕ್ಕಾಗದೇ ಎಂದರು ಐತಾಳರು. 'ರಸ್ತೆಯ ತಿರುಗಾಡಿದ್ದೇನೆಂದು ಗುಡ್ಡದ ದಾರಿಯಲ್ಲಿ ಹೋಗಿ ಗೊತ್ತಿಲ್ಲ''[೬] ಎಂದನು ಲಚ್ಚ (ಪು-೧೬೯)

ಲಚ್ಚನು ಹೋಟೆಲನ್ನಿಟ್ಟರೆ ತಾನು ಹಣವನ್ನು ಹೆಚ್ಚು ಸಂಪಾದನೆ ಮಾಡಬಹುದೆಂದು ತಿಳಿದು ಒರಟನ ಕಿವಿಗೂ ಚಾಡಿಮಾತುಗಳನ್ನು ಸುರಿಸಿ ಅವನಿಗೆ ಹೇಗೆ ಆಸ್ತಿಯನ್ನು ಪಾಲುಮಾಡುವ ಆಸೆಯನ್ನು ಪ್ರೇರೇಪಿಸಿದನೆಂಬುದನ್ನು ಕಾಣಬಹುದು.

''ಮಲೆಬಾರಿನಲ್ಲಿ ಸಾಲ, ಬೋರಿಂಗ್ ಪೇಟೆಯಲ್ಲಿ ಹೋಟೆಲುಗಳನ್ನು ತೆಗೆದು ಮಾಡಿದ ಸಾಲಗಳು ಬಳ್ಳಾರಿಯಲ್ಲಿದ್ದಾಗ ಮಾಡಿದ ಸಾಲಗಳು, ಸಾಲದ ತಗಾದೆಗಳು ಇವೆಲ್ಲವೂ ಲಚ್ಚ ಜೈಲಿಗೆ ಕಳುಹಿಸುವ ಬೆದರಿಕೆಗಳು ಒಡ್ಡಿದವು. ನಾಗವೇಣಿಯು ತನ್ನ ಗಂಡನನ್ನು ಜೈಲಿಗೆ ಕಳುಹಿಸಬಾರದೆಂದು ತಿಳಿದು ತನ್ನ ಚಿಕ್ಕಪ್ಪ ನಾರಾಯಣ ಮೊರೆ ಹೋಗಿ ಇದ್ದಂಥ ಆಸ್ತಿಯನ್ನು ಕ್ರಹೀಸಿ ಸಾಲವನ್ನು ತೀರಿಸಿ ತನ್ನ ಗಂಡನನ್ನು ಉಳಿಸಿಕೊಂಡಳು. ಇದು ನಾಗದವೇಣಿಯ ಮಾನವೀಯ ಸಂಬಂಧಗಳ ಹೊಣೆಗದಾರಿಕೆಯು ಹೌದು.ಜೀವನದ ನೈತಿಕ ಮೌಲ್ಯಗಳ ಪ್ರತಿಪಾದನೆಯು ಹೌದು.

ಇಷ್ಟೆಲ್ಲಾ ತೊಂದರೆ ಮಾಡಿದ ಲಚ್ಚನಿಗೆ ನಾಗವೇಣಿಯು ಮತ್ತೇ ''ನನಗಾಗಿ ನಾನು ಈ ಆಸ್ತಿ ಇರಿಸಿಕೊಂಡಿಲ್ಲ. ಅದನ್ನು ತಿರುಗಿ ಮತ್ತೆ ನಿಮ್ಮ ಹೆಸರಿಗೇ ಮಾಡುತ್ತೇನೆ. ನಿಮ್ಮ ಮನಸ್ಸಿನ ಕೊರಗು ನನಗೆ ತಿಳಿಯುತ್ತದೆ. ನೀವು ಬೇಸರದಿಂದ ಬದುಕಿದರೆ ನನಗೇನು ಸಂತೋಷ ಬಂದೀತು ?''[೭] (ಪು- ೨೩೭).

''ಸಾಲಿಗ್ರಾಮದ ಹಬ್ಬ ಕಳೆಯಲು ಒಂದು ದಿನ ಬಲು ಚಮತ್ಕಾರವಾಗಿ ನಾಗವೇಣಿಯನ್ನು ಉಡುಪಿಗೆ ಕರೆದೊಯ್ಯುವೆನೆಂದು ಹೇಳಿ. ಕರೆದೊಯ್ದು ಲಚ್ಚನು ಬ್ರಹ್ಮಾವರಕ್ಕೆ ಹೋಗಿ ಅವಳ ಹೆಸರಿಗಿದ್ದ ಆಸ್ತಿಗಳನ್ನು ತನ್ನ ಹೆಸರಿಗೆ ಮಾಡಿಸಿಕೊಂಡು ಬಂದನು. ನಾಗವೇಣಿ ಈ ಸುದ್ದಿಯನ್ನು ಯಾರಿಗೂ ತಿಳಿಸಲಿಲ್ಲ. ಲಚ್ಚನು ಆ ವಿಷಯವಾಗಿ ಯಾರಲ್ಲೂ ಬಾಯಿ ಬಿಡಲಿಲ್ಲ. ಎಲ್ಲಾರು ಮನಸ್ಸಿನಲ್ಲೂ ಕೃಷ್ಣದೇವರ ದರ್ಶನಕ್ಕೆ ಹೋಗಿ ಬಂದಿರಬೇಕು ಎಂದು ಅನಿಸಿತು.''[೮] (ಪು-೨೩೭-೨೩೮)

ಹೀಗೆ ಲಚ್ಚನು ಯಾವ ವ್ಯಕ್ತಿತ್ವದ ಮೌಲ್ಯಗಳನ್ನು ಹಿಡಿಯದೆ ತರಗೆಲೆಯಾಗಿ ಮಾನವ ಸಂಬಂಧಗಳ ವಾಸನೆಯನ್ನು ಕಾಣದೆ ಜೀವನದ ಬಗ್ಗೆ ಯೋಚಿಸದೆ ತನ್ನ ಗಾಣಕ್ಕೆ ತಾನೇ ಸಿಲುಕಿದಂತೆ ಅವನ ವ್ಯಕ್ತಿತ್ವ ವಿನಾಶದ ಹಾದಿ ಹಿಡಿಯುತ್ತದೆ. ನಾಗವೇಣಿ ಜಗತ್ತು ವಿಸ್ತಾರವಾದಂತೆಲ್ಲ ಸಾಂಪ್ರದಾಯಿಕ ಮೌಲ್ಯಗಳಿಂದ ದೂರ ಸರಿಯುತ್ತಾಳೆ. ಹೀಗಾಗಿಯೇ ಅವಳು ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳುವಳು. ಜೀವನದ ನೈತಿಕ ಮೌಲ್ಯಗಳನ್ನು ಕಾಪಾಡಿಕೊಳ್ಳುವುದಕ್ಕಾಗಿ ತನ್ನ ಕಾಲಘಟ್ಟದಲ್ಲಿರುವ ಸಾಂಸ್ಕೃತಿಕ ಎಳೆಗಳನ್ನು ಹಿಡಿದುಕೊಂಡು ಅವುಗಳನ್ನು ತನ್ನ ಮೌಲ್ಯಗಳಾಗಿ ಹಿಡಿದುಕೊಳ್ಳುತ್ತಾಳೆ. ಸಮಸ್ಯೆಗಳು ಎದುರಾದಾಗ ತಾಳ್ಮೆಯಿಂದ ಆಲೋಚಿಸಿ ಮಾನವೀಯ ದೃಷ್ಟಿಕೋನದಿಂದ ಜೀವನದ ನೈತಿಕತೆಯ ಪ್ರಜ್ಞೆಯನ್ನು ಬೆಳೆಸುವುದರ ಮುಖಾಂತರ ಬೆಳವಣಿಗೆಯ ಹಾದಿಯನ್ನು ತೋರಿಸುತ್ತಾಳೆ.

ರಾಮು ತನ್ನ ಕಾಲಘಟ್ಟದ ಜೀವನವನ್ನು ರೂಪಿಸಿಕೊಳ್ಳಬೇಕಾದರೆ ಬಹುಮುಖಪ್ರತಿಭೆ ಅನಿವಾರ್ಯವಾಗುತ್ತದೆ. ಇದಕ್ಕೆ ಕಾರಣ ಆಧುನೀಕರಣದ ಸಂಕೀರ್ಣ ವ್ಯವಸ್ಥೆ ಮತ್ತು ಅವಕಾಶಗಳು ಹೀಗಾಗಿಯೇ ಅವನು ಮನಸ್ಸು ಮಾಡಿದ್ದರೆ ನಗರದಲ್ಲೇ ದೊಡ್ಡ ಶ್ರೀಮಂತನಾಗಬಹುದಾಗಿತ್ತು. ತನ್ನ ತಾಯಿ ಹೇಳುವ 'ನಿನ್ನ ಅಜ್ಜನು ಮಡಗಿರುವ ಕುಡಿಕೆ ಹಣ ಸಿಕ್ಕೀತು' ಎನ್ನುವ ಮಾತು. ಇನ್ನೇನು ಸಮಸ್ಯೆಯಿಲ್ಲ ನೀನು ಊರಿಗೆ ಬಂದು

ಬಿಡು ಎನ್ನುತ್ತಾಳೆ. ರಾಮನು ತನ್ನ ಮಣ್ಣಿಗೆ ಮರಳುತ್ತಾನೆ ಕಾದಂಬರಿಯ ಕೊನೆಯು ಪೂರ್ಣಗೊಳ್ಳುತ್ತದೆ. ಇನ್ನೂ ಮುಂದುವರೆಯುತ್ತದೆಯೇನೋ ಎಂದು ಅನಿಸುತ್ತದೆ. ಹಿಗೆ ತಮ್ಮದೇ ಆದ ಕಾಲಘಟ್ಟದ ಪರಿಸರ ಸಂಸ್ಕೃತಿಯಲ್ಲಿ ಮೌಲ್ಯಗಳನ್ನು ಹೊಂದಿದ್ದು ಪ್ರತಿಪಾದಿಸುತ್ತ ವಿನಾಶದ ಅಂಚಿಗೆ ಹೋಗುವುದನ್ನು ಕಾಣಬಹುದು.

'ಗ್ರಾಮಾಯಣ' ಕಾದಂಬರಿಯಲ್ಲಿ ಪಾದಳಿಯೇ ಎಲ್ಲಾ ಬೆಳವಣಿಗೆಯು ಸಾಂಸ್ಕೃತಿಕ ಕೇಂದ್ರ ಬಿಂದು. ಬಾಪೂಸಾಹೇಬ, ಪಡದಯ್ಯನೊಂದಿಗೆ ಸಂಘರ್ಷ ಮಾಡಿ ಚಿಮಣಾಳನ್ನು ಒಲಿಸಿಕೊಳ್ಳುವ ಸಂಚು ಇದೇ ಕಾದಂಬರಿಯ ಮುಖ್ಯ ವಸ್ತುವಾಗಿದೆ. ಇದೇ ನೈತಿಕ ಮೌಲ್ಯಗಳ ಪ್ರತಿಪಾದನೆಯು ವಿನಾಶವೂ ಹೌದು.

''ಪಡದಯ್ಯನವರ ಅಂತರಂಗದ ಕೋಣೆಯಿಂದ ಹೊರಗೆ ಬಂದಾಗ ಬಾಪೂ ಸಾಹೇಬನ ಮುಖ ಅರಳಿತ್ತು. ''ಸ್ವಾಮೇರ, ನಿಮ್ಮ ಶಾಣೇತನಕ್ಕೆ ಬೇಲಿನ್ಯ ಇಲ್ಲಿ ಜೋಡ್ರಿ, ನೀನು ಮೂರುತಾಸು ತಲೆಕೆಡಿಸಿಕೊಂಡೆ. ಅದರ ಇಷ್ಟು ಹಗಲಾಗಿ ಕೆಲಸಾ ಮಾಡಿಕೊಳ್ಳೋ ಹಂಚಿಕೆ ಹೊಳದಿದ್ದಿಲ್ಲ ಎಂದು ಹೊಗಳಿ ಪಡದಯ್ಯನವರಿಗೆ ಧನ್ಯವಾದಗಳನ್ನರ್ಪಿಸಿದ ಪಡದಯ್ಯನವರು ಅವನ ಸಮೀಪಕ್ಕೆ ಬಂದು ''ಜಾಗೀರದಾರ ಸಾಹೇಬ , ವಿಷಯ ನಾಜೂರವೆಲೆ. ಒಂದ ಮಾತ ಹೇಳತೇನಿ ಆದಾದಾಗ ಈಸುದ್ದಿ ತಿಳಿದರ ಒಂದು ಹೋಗಿ ಒಂದಾದೀತು. ನೀವು ನನ್ನ ಮ್ಯಾಗ ವಿಶ್ವಾಸ ಇಡು. ನಮ್ಮ ದಾನಿ ನಿಮ್ಮನ್ನು ನಾಳ ಕರ್‍ಯಾಕ ಬಂದ ಕೂಡಲೇ ನೀವ ಮಠಕ್ಕೆ ಬರ್ರಿ. ಕಾರಹುಣ್ಣಿನ ವಾಡದ ಎತ್ತಿನ ಮೆರವಣಿಗೆ ನೋಡಾಕ ಊರ ಜನಾ ಎಲ್ಲಾ ಆಗಸಿ ಮುಂದ ನೆರದಿರತಾರ. ಆಗ್ಯ ನಮ್ಮದಾನಿ ಚಿಮಣಾನ್ನ ಮಠಕ್ಕೆ ಕರಕೊಂಡು ಬರತಾಳ. ನೀವು ಎತ್ತಿನ ಮೆರವಣಿಗೆ ಮುಗಸೂತನಾ ಅರೆ ಚಿಮಣಾನ ಮನಸ್ಸು ಒಲಿಸಿರತಾಳ. ಅರೆ ಬಂದು ನಿಮ್ಮನ್ನು ಕರೆದಾಗ ನೀವು ಬಿಟ್ಟ ಕೆಲಸಾ ಬಿಟ್ಟು ಬರಬೇಕು ಆತು''ಎಂದು ಉಪಾಯ ಹೇಳಿ ಬೀಳ್ಕೊಟ್ಟರು. ''[೯] (ಪು-೧೩)

ದಾನವ್ವನ ಮೋಹಕ ಮಾತುಗಳು ಚಿಮಣಾಳಲ್ಲಿ ಇಳಿದು ಪಡದಪ್ಪನ ವಾಡೆಗೆ ಹೋಗದಂತೆ ಮಾಡಿದವು. ಪಡದಯ್ಯನು 'ನೀ ಅವರು ಬರೇ ಮಠ ಇಲ್ಲೇ ಕುಂತಿರು ಒಂದು ವಿಚಿತ್ರ ನಗೆ ನಕ್ಕನು. ಸ್ವಾಮಿಗಳು ವಿಚಾರವಂತರಾದವರಂತೆ ಗಡ್ಡ ತಿಕ್ಕುತ್ತ ಕುಳಿತರು. ಏನು ಅರಿಯದ ಚಿಮಣಾ ಪಡದಯ್ಯನವರ ಬಲಗಿವಿಯಲ್ಲಿದ್ದ ಬಂಗಾರದಲ್ಲಿ ಕಟ್ಟಿದ ದೊಡ್ಡ ರುದ್ರಾಕ್ಷಿಯನ್ನೇ ನೋಡುತ್ತಾ ಕುಳಿತಳು.

ಚಿಮಣಾಳ ಮದ್ಗತೆಯ ಬದುಕು ಪಡದಯ್ಯನಿಂದ ಬಲಿಯಾಯಿತು. ಈ ವಿಚಾರ ತಿಳಿದ ಪುತಳೀಬಾಯಿ ಸ್ವಾಮೀಗೆ ಮತ್ತು ತನ್ನ ತಮ್ಮನ ಸ್ವ ತಪ್ಪಿಗೆ ಗುರಿಪಡಿಸಿದಳು. ಈ ಪ್ರಕರಣ ಬಲ್ಲರಿಗಿಂತ ಹೆಚ್ಚಾಗಿ ಪಡದಯ್ಯನ ಪ್ರೇಯಸಿಯಾದ ದಾನವ್ವನನ್ನು ರೇಗಿಸಿತು. ತನ್ನನ್ನು ಹಾಳು ಮಾಡಿದ್ದಲ್ಲದೆ ಈ ಎಳೆಗೊಬ್ಬ ಚಿಮಣಾಳನ್ನು ಹಾಳುಗೆಡವಿದನಲ್ಲ ಎಂದು ಬೆಚ್ಚಿಬಿದ್ದಳು.

'ಚಿಮಣಾಳ ಈ ಪ್ರಕರಣ ಜನಸಾಮಾನ್ಯರ ಪ್ರಪಂಚಕ್ಕೆ ಹರಿಯಿತು. ಊರಿನ ಮುಖಂಡರಾದ ಬಾಳುಚಾರ್ಯರು, ಶಂಕರ ಗೌಡ, ಶೇಷಪ್ಪ, ಇವರೆಲ್ಲರೂ ಸೇರಿ ಆ ಪ್ರಕರಣವನ್ನು ಬಗೆಹರಿಸಲು ಹೋಗಿ ಹಣದ ಕಾರಣವನ್ನೇ ಮುಖ್ಯವಾಗಿ ಇಟ್ಟುಕೊಂಡು ಚಿಮಣಾಳಿಗಾದ ಅನ್ಯಾಯವನ್ನು ತಾವೇ ಮುಚ್ಚಿದರು.

ಇಲ್ಲಿ ಕಾದಂಬರಿಯಲ್ಲಿ ಬರುವ ಎಲ್ಲಾ ಪಾತ್ರಗಳು ಪ್ರಬಲವಾದ ಒಂದೊಂದು ದೌರ್ಬಲ್ಯವನ್ನು ಹೊಂದಿದ್ದು, ಮತ್ತೊಂದು ಪಾತ್ರಕ್ಕೆ ದೌರ್ಬಲ್ಯದ ಬೇರುಗಳು ಸಿಲುಕುವಂತೆ ಕಾಣುತ್ತವೆ. ಅದಕ್ಕಾಗಿಯೇ ಕೆಡುಕಿನ ಬೇರುಗಳು ಎಲ್ಲಿವೆ ಎಂದು ಸ್ಪಷ್ಟವಾಗಿ ಗೋಚರಿಸುವುದಿಲ್ಲ. ಜೀವನದ ನೈತಿಕ ಮೌಲ್ಯಗಳು ಪ್ರತಿಪಾದನೆ ನಿಂತ ವಿನಾಶಕ್ಕೆ ಹೆಚ್ಚು ಈ ಕಾದಂಬರಿ ಎಡೆಮಾಡಿಕೊಡುತ್ತದೆ. ಯಾವುದೇ ಪಾಪ ಎಂದುಹೇಳುತ್ತಾರೆ ಹೊರತು ನಿರ್ದಿಷ್ಟವಾಗಿ ಪಾಪಯಾವುದು ಎಂದು ಹೇಳುವುದಕ್ಕೆ ಬರುವುದಿಲ್ಲ. ಶಿಲೆದಾರ ನಾನಾನ ಸಾವು ರಹಸ್ಯವಾಗಿ ನಡೆಯುತ್ತದೆ. ಆಸಮಸ್ಯೆ ಬಗೆಹರಿಯುವಷ್ಟರಲ್ಲೇ ಪುತಳೀಬಾಯಿಯ ಸಾವಾಗುತ್ತದೆ. ಕಾದಂಬರಿ ಮುಂದುವರೆದಂತೆಲ್ಲಾ ಪಾದಳ್ಳಿಯ ಗೌಡರ ಮಕ್ಕಳು ಬಾಪೂ ಸಾಹೇಬನಿಂದ ದುಶ್ಚಟಕ್ಕೆ ಬಲಿಯಾಗುತ್ತಾರೆ.

ಹೊರಗಿನಿಂದ ಬರುವ ಫಕ್ರುದ್ದೀನ್ ಸಾಹೇಬ ತನಗೆ ಬೇಕಾಗಿರುವ ಆಸೆಗಳನ್ನು ಜನಸಾಮಾನ್ಯರಲ್ಲಿ ಶೋಷಿಸುವುದರ ಮುಖಾಂತರವೇ ಸುಲಿಗೆ ಮಾಡುತ್ತಾನೆ. ಹೀಗೆ ಈ ಕಾದಂಬರಿಯು ದುರಂತಕ್ಕೆ ಈಡಾಗುತ್ತದೆ. ಬಾಳಚಾರ್ಯ ಮತ್ತು ದಾದಾ ಚಿಮಣಾರನ್ನು ಬಿಟ್ಟರೆ ಮಿಕ್ಕೆಲ್ಲಾ ಪಾತ್ರಗಳು ವಿನಾಶದ ಅಂಚಿಗೆ ಕರೆದೊಯ್ಯುತ್ತವೆ. ಕಾದಂಬರಿಯಲ್ಲಿ ಉದ್ದಕ್ಕೂ ಪಾಪದ ವಿಚಾರ ಬೇರೆ ಬೇರೆ ಮಹಲುಗಳಲ್ಲಿ ವಿನ್ಯಾಸಗೊಳ್ಳುತ್ತಾ ಹೋಗುತ್ತದೆ.

''ಆದರೆ ಪಾಪ ರಕ್ತ ಬೀಜ ರಾಕ್ಷಸನಂತೆ, ಕೊಂದರೆ ಸಾಯಲಾರದ ವಸ್ತುವೆಂದರೆ ಅದೊಂದೆ. ನೂರು ನಾನಾಸಾಹೇಬರು ಸತ್ತರು ಪಾಪ ಸಾಯುವುದಿಲ್ಲ'' ಎನ್ನುವ ಮಾತು ಕಾದಂಬರಿಯಲ್ಲಿ ಬರುತ್ತದೆ. ಪುಣ್ಯ ತೀರಿದೆ, ಶಾಪ ತಟ್ಟಿದೆ' ಎಂಬ ಮಾತುಗಳು ಬಂದಿವೆ.

ಪರಂಪರಾಗತವಾದ ವಿಚಾರಗಳನ್ನೇ ಪಡದಯ್ಯ ಮಾಡಿದ್ದು ಅನೀತಿ ಎಂಬುದು ಎಲ್ಲರಿಗೂ ತಿಳಿದಿದ್ದರೂ ಯಾರೂ ಅದನ್ನು ಪ್ರಶ್ನಿಸುವ ಸಾಹಸ ಮಾಡುವುದಿಲ್ಲ. ಆಂತರಿಕ ಮತ್ತು ಬಾಹ್ಯ ಕಾರಣಗಳು ಕಾದಂಬರಿಯ ಕುಸಿತಕ್ಕೆ ಕಾರಣವಾಗಿವೆ.

ಹೀಗೆ ಒಂದು ಆವೃತಬೀಜಕ್ಕೆ ಆ ಬೀಜದ ಆವೃತವೇ ಕಾರಣವಾಗಿ ಸಸ್ಯದ ಬೆಳವಣಿಗೆ ಮತ್ತು ನಾಶಕ್ಕೆ ಕಾರಣವಾಗಿರುವಂತೆ ಜೀವನಕ್ಕಿರುವ ನೈತಿಕ ಮೌಲ್ಯಗಳೇ ಬದುಕಿನ ಅಂತರಾಳದ ಪ್ರಗತಿ ಮತ್ತು ವಿನಾಶಕ್ಕೆ ಕಾರಣವಾಗಿರುತ್ತವೆ.

## ಅಡಿಟಿಪ್ಪಣಿ


೧. ಡಾ. ಕೆ. ಶಿವರಾಮಕಾರಂತ, 'ಮರಳಿ ಮಣ್ಣಿಗೆ', ಕಾದಂಬರಿ, ಸಪ್ನ ಬುಕ್‌ಹೌಸ್, ಬೆಂಗಳೂರು, ಮೇ ೨೦೦೬, ಮರುಮುದ್ರಣ. ಪು- ೧೧೬.

೨. ಕುವೆಂಪು, 'ಕಾನೂರು ಹೆಗ್ಗಡಿತಿ', ಕಾದಂಬರಿ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೨ನೇ ಮುದ್ರಣ, ೨೦೦೭. ಪು-೩೪.

೩. ರಾವಬಹದ್ದೂರ, 'ಗ್ರಾಮಾಯಣ', ಕಾದಂಬರಿ, ಉಷಾಸಾಹಿತ್ಯಮಾಲೆ, ಮೈಸೂರು, ೩ ನೇ ಮುದ್ರಣ, ೧೯೮೧. ಪು-೧೨.

೪. ಮರಳಿ ಮಣ್ಣಿಗೆ, ಕಾದಂಬರಿ, ಪು-೧೬೬.

೫. ಅದೇ ಪು-೧೬೬

೬. ಅದೇ ಪು-೧೬೬

೭. ಅದೇ ಪು-೨೩೭

೮. ಅದೇ ಪು-೨೩೭-೨೩೮

೯. ಗ್ರಾಮಾಯಣ, ಕಾದಂಬರಿ, ಪು-೧೩

# ಅಧ್ಯಾಯ - ೬

## ಮಾನವೀಯ ಸಂಬಂಧಗಳ ಹೊಣೆಗಾರಿಕೆ

ಮಾನವೀಯ ಸಂಬಂಧಗಳು ವಿಶಾಲವಾದ ಜಗತ್ತನ್ನು ಸೃಷ್ಟಿಸುವ ಪರಸ್ಪರ ಮೈತ್ರಿಯಿಂದ ಬಾಳುವ ಭಿನ್ನಾಭಿಪ್ರಾಯಗಳು ಬಂದರೂ, ತೊಂದರೆಗಳು, ಸಮಸ್ಯೆಗಳೂ ಎದುರಾದರೂ ಮಾನವೀಯ ಸಂಬಂಧಗಳ ಹಿನ್ನೆಲೆಯಲ್ಲೇ ಇವೆಲ್ಲವನ್ನು ಮರೆತು ಹೊಣೆಗಾರಿಕೆಯನ್ನು ಮೂಡಿಸುತ್ತದೆ.

ಈ ಮಾತು ಕೇವಲ ಮಾನವನ ಪ್ರ ಪಂಚಕ್ಕೆ ಸೀಮಿತವಲ್ಲ. ಇದು ಪ್ರಕೃತಿ ಪರಿಸರ ಪ್ರಾಣಿ-ಪಕ್ಷಿಗಳು ಇವೆಲ್ಲದಕ್ಕೂ ಅನ್ವಯಿಸುತ್ತದೆ. ನಿಜವಾದ ಮಾನವೀಯ ಸಂಬಂಧಗಳ ಕರುಣೆ, ಸಹಾನುಭೂತಿ ನೈತಿಕತೆ, ಅನುಭವಗಳಿಂದ ಪಕ್ವಗೊಂಡಿರುತ್ತದೆ. ಸಾತ್ವಿಕತೆಯು ಉಳಿಯ ಬೇಕಾದರೆ ಮಾನವೀಯ ಸಂಬಂಧಗಳ ಹೊಣೆಗಾರಿಕೆ ಬಹಳ ಮುಖ್ಯವಾದದ್ದು. ಯಾವೊಂದು ಸಮಾಜವು ಈ ಮಾನವೀಯ ಸಂಬಂಧಗಳ ಹೊಣೆಗಾರಿಕೆಯನ್ನು ಮರೆತರೆ ಆ ಸಮಾಜದಲ್ಲಿರುವ ಕೆಡುಕುಗಳು ಬುಗಿಲೆದ್ದು ಸುಸಂಸ್ಕೃತ ಸಮಾಜವನ್ನೇ ಧ್ವಂಸಮಾಡಬಹುದು. ಮಾನವೀಯ ಸಂಬಂಧಗಳಲ್ಲಿ ಅವುಗಳದೇ ಆದ ನೈತಿಕ ಮೌಲ್ಯಗಳು ಒಳಿತಿನ ಛಾಯೆಗಳು ತಾಳ್ಮೆ ಇವು ಮಡುಗಟ್ಟಿ ಸಮಸ್ಯೆಗಳು ಬಂದಾಗ ನಿಧಾನವಾಗಿ ನಿಯಂತ್ರಿಸುತ್ತವೆ. ಬಾಹ್ಯಶಕ್ತಿಗಳಿಗಿಂತ ಆಂತರಿಕ ಶಕ್ತಿಗಳು ಬಹಳ ಮುಖ್ಯ. ಶಾರೀರಕತೆಗಿಂತ ಬೌದ್ಧಿಕತೆಯ ವಿನ್ಯಾಸ ಮುಖ್ಯವಾದುದು.

ಯಾವೊಬ್ಬನಲ್ಲಿ ಹೊಣೆಗಾರಿಕೆ ಇರುತ್ತದೆಯೋ ಅವನಲ್ಲಿ ಮಾನವೀಯ ಸಂಬಂಧಗಳು ಇರುತ್ತವೆ ಎಂದರ್ಥ. ಹೀಗಾಗಿಯೇ ಅವನು ಎಲ್ಲಾ ವ್ಯಕ್ತಿಗಳಿಗಿಂತ ಭಿನ್ನವಾಗಿ ಕಾಣುತ್ತಾನೆ. ನಿರ್ಧಿಷ್ಟ ಆಲೋಚನೆ ಗಂಭೀರವಾದ ನಿರ್ಧಾರ ಮತ್ತು ಕೊಟ್ಟ ವಚನವನ್ನು ಉಳಿಸಿಕೊಳ್ಳಲು ಯತ್ನಿಸುತ್ತಾನೆ. ಕಾರಂತರು ವ್ಯಕ್ತಿಪ್ರಜ್ಞೆಯ ಮೂಲಕ ಬದುಕನ್ನು ನೋಡುವುದಿಲ್ಲ. ಮನುಷ್ಯನ ಸಾಮಾಜಿಕ ಸಂಬಂಧಗಳ ಚಟುವಟಿಕೆಗಳ ಪ್ರೇರಣೆ ಎಂಬಂತೆ ಒಟ್ಟು ಬದುಕಿನ ವ್ಯಾಪಾರಗಳಲ್ಲಿಪ್ರಜ್ಞೆಯನ್ನು ಅರಸುತ್ತಾರೆ. ಒಂದು ಸಮುದಾಯಕ ಜೀವನ ಶ್ರದ್ಧೆಯನ್ನು ನಿಯಂತ್ರಿಸುತ್ತಿರುವ ಶಕ್ತಿಗಳಾವುವು ಎಂಬುದನ್ನು ಶೋಧಿಸಿಕೊಳ್ಳಲು ಕಾರಂತರು ವೈಜ್ಞಾನಿಕ ಮಾರ್ಗವನ್ನು ಅನುಸರಿಸುತ್ತಾರೆ. ಕಾರಂತರು ಬದುಕನ್ನು ಹಿಡಿಯಾಗಿ

ತಿರಸ್ಕರಿಸುವುದಿಲ್ಲ. ಆದರ ಅಪೂರ್ಣತೆಯನ್ನಷ್ಟೇ ಅವರು ವಿರೋಧಿಸುತ್ತಾರೆ. ಎನಿಸುತ್ತದೆ. ಬಾಳ್ವೆ ಬೆಳಕಿನಲ್ಲಿ ಕಾರಂತರು ಬರೆಯುತ್ತಾರೆ '' ಬಾಳ್ವೆಯ ಪ್ರಶ್ನೆಯು ಒಬ್ಬರು ಬಾಳಿ, ಇನ್ನೊಬ್ಬರು ಉತ್ತರಿಸಿ, ಮೂರನೆಯವರು ಒಪ್ಪಿ ಸಾಗುವಂಥ ಪ್ರಶ್ನೆ ಎಂದೂ ಆಗದಿರಲಾರದು. ಅನಿವಾರ್ಯವಾಗಿರುವ ಬಾಳಿನರೀತಿಯನ್ನು ಕಂಡರೆ ಅದು ಅವರವರು ಬಾಳಿ, ಬದುಕಿ, ಅನುಭವಿಸಿ, ಹೋರಾಡಿ, ಪರಿಸ್ಥಿತಿಗಳಿಗೆ ಸಮವಾಗಿ ಹೊಂದಿಕೊಂಡು ಪರಿಣಾಮಗೊಳ್ಳಬೇಕಾದ ಸಮಸ್ಯೆಯೆಂದುನನಗೆ ಅನ್ನಿಸುತ್ತದೆ. ಅವನವನ ಜೀವನಕ್ಕೆ ಅವನವನೇ ದುಡಿದು ಉತ್ತರಗಳಿಸಬೇಕು. ಅದರಿಂದ ಮಾತ್ರಜೀವನ ಸಾರ್ಥಕ. ಹೀಗಾಗಲು 'ಬಾಳ್ವೆ'ಯನ್ನು ನಾವು ನಿರಾಕರಿಸದೆ ಮೊದಲಿಗೆ ಒಪ್ಪಬೇಕು. ತಮ್ಮ ಜೀವನದಿಂದಲೇ ಜೀವನ ಏನು ?ಎಂದು ತಿಳಿಯಲೆತ್ನಿಸಬೇಕು. ಅರಿವುಳ್ಳ ಬದುಕು, ಸಹಾನುಭೂತಿಯುಳ್ಳ ನಡತೆ - ಇವುಗಳಿಂದ ನಮ್ಮ ಬದುಕು ಅರಳಬೇಕು. ಬದಲು ಯಾವುದೋ ದಿನ ಯಾವುದೋ ಜೀವ, ತನಗೆ ಹಿತವೆಂದು ನಿರ್ಣಯಿಸಿದ ತೀರ್ಮಾನವನ್ನು ನಾವು ಒಪ್ಪಿದುದರಿಂದ ನಮ್ಮ ಬದುಕು ವಿಸ್ತರಿಸೀತು ಎಂಬುದು ಅನುಮಾನಾಸ್ಪದ ಸಂಗತಿಯೇ ಸರಿ. ಇದರಿಂದ ಪರರ ಅನುಭವಗಳ ಪಾಠ ನಮಗೆ ಬೇಡವೆಂದು ತೀರ್ಮಾನವಲ್ಲ. ವಿಚಾರ ಸಾಮ್ಯತೆ, ಅನುಭವ ಸಾಮ್ಯತೆ, ಪರಿಸ್ಥಿತಿ ಸಾಮ್ಯತೆಇವುಗಳಿಂದಲ್ಲದೆ ಪರರ ಅನುಭವಗಳು ನಮ್ಮ ಜೀವನಕ್ಕೆ ನೆರವಾಗವು. ನಮ್ಮಲ್ಲಿ ಅರಗದ ಅವು ನಮಗೆ ಹಿತಮಾಡಲಾರವು. ತಂತಮ್ಮ ಬದುಕಿನಲ್ಲಿ ಕಾಣದ ಸತ್ಯ, ಬೆಳಕುಗಳು ಪರರ ಬಾಳ್ವೆಯಿಂದ ಬಂದು ನಮಗೆ ನೆರವಾಗುವುದುಂಟೇ ?

ಬದುಕಿನ ಸಹಜ ಸ್ಪಷ್ಟವಿಲ್ಲದ ಕೇವಲ ವಿಚಾರಗಳನ್ನು ಕಾರಂತರು ಏಕೆ ತಿರಸ್ಕರಿಸುತ್ತಾರೆಂದರೆ ಅನುಭವವಿಲ್ಲದಿರುವುದು ಬದುಕಿನಲ್ಲಿ ತೃಪ್ತಿ ಎನ್ನುವುದು ದೊರಕಲಾರದು ಎಂಬ ಪ್ರಾಥಮಿಕ ಸತ್ಯದ ಬೆಳಕಿನಲ್ಲೇ ಕಾರಂತರ ಮನಸ್ಸು ಕೆಲಸ ಮಾಡುತ್ತದೆ. ಪೂರ್ವನಿರ್ಧಾರಿತ ನಿಲುವಾಗಿ ಮೂಡಿಬರದೆ ಹಲವು ವ್ಯಕ್ತಿಗಳ ಸಂದರ್ಭಗಳ ಡಯಲಿಕ್ಟಿಕ್‌ನಲ್ಲಿ ಹುಟ್ಟಿಕೊಂಡು ಸಮಗ್ರವಾಗುತ್ತದೆ.ಕಾರಂತರ ಕಾದಂಬರಿಯಲ್ಲಿ ಬರುವ ವ್ಯಕ್ತಿಗಳು ತಮ್ಮ ಧಾರ್ಮಿಕ ಸಾಂಸ್ಕೃತಿಕ ಆವರಣವನ್ನು ಪ್ರಜ್ಞಾಪೂರ್ವಕವಾಗಿಯೇ ಅಪ್ರಜ್ಞಾಪೂರ್ವಕವಾಗಿಯೋ ಮೀರಲು ಪ್ರಯತ್ನಿಸುತ್ತಾರೆ. ಫಲಿತಾಂಶವು ಕೆಲವೊಮ್ಮೆ ವೈಯಕ್ತಿಕ ಗಟ್ಟಿತನವನ್ನು ಮತ್ತೆ ಕೆಲವು ವೇಳೆ ಸಂದರ್ಭದ ಸ್ವರೂಪವನ್ನು ಅವಲಂಬಿಸಿರುತ್ತದೆ. ನೈತಿಕ...., ಅನೈತಿಕ...., ಸಭ್ಯ, ....ಅಸಭ್ಯ....ಎನ್ನುವುದು

ಸಾಪೇಕ್ಷವಾದುದು. ಯಾವುದು ಪ್ರೇಮ ಯಾವುದು ವ್ಯಭಿಚಾರವೆಂದು ನಿಖರವಾಗಿ ಗುರುತಿಸಲಾರದಷ್ಟು ಸಂಕೀರ್ಣವಾಗಿರುತ್ತದೆ. ಕಾರಂತರ ಕಾದಂಬರಿಯಲ್ಲಿ 'ಪ್ರಕೃತಿ ಮತ್ತು ದೇಹ ಸಂಘರ್ಷ' ಇದ್ದೇ ಇರುತ್ತದೆ. ಇಲ್ಲಿ ಗೆಲ್ಲುವುದು ಪ್ರಕೃತಿಯೇ ಹೊರತು ವ್ಯಕ್ತಿಯ ಸಂಘರ್ಷವಲ್ಲ. 'ಹುಚ್ಚು ಮನಸ್ಸಿನ ಹತ್ತು ಮುಖಗಳು' ದಲ್ಲಿ ಕಾರಂತರು ಬರೆಯುತ್ತಾರೆ. ''ಜೀವನ ಮನುಷ್ಯನದೇ ಇರಲಿ, ಪ್ರಾಣಿಯದೇ ಇರಲಿ ಅದು ಅವ್ಯಾಹತವಾದ ಒಂದು ಪ್ರವಾಹ. ನಮ್ಮ ಎಲ್ಲ ಸ್ವಭಾವ, ಲವಲವಿಕೆ ಮನೋಲಹರಿಗಳ ಬೆಳವಣಿಗೆ ಹುಟ್ಟಿನಿಂದ ತೊಡಗುತ್ತದೆ. ಪ್ರಣಯ ಕಾಮಗಳೂ ಇದರಿಂದ ಹೊರತಲ್ಲ. ಎಳೆಯ ಮಕ್ಕಳ ಮುದ್ದಾಟ, ಅನೇಕ ಬಗೆಯ ಸ್ಪರ್ಶ ಚೇಷ್ಟೆಗಳು, ಯಾವುದೋ ಒಂದುಗಳಿಗೆಯಿಂದ ಮುಂದೆ ಒಲುಮೆ ಇಲ್ಲವೆ ಪ್ರಣಯ ಚೇಷ್ಟೆಗಳೆನಿಸಿಕೊಂಡರೂ, ಎಳೆತನದಿಂದಲೇ ಅವುಗಳ ಪ್ರಾರಂಭ, ಮುದ್ದಾಟ, ಚೇಷ್ಟೆಗೆ ಒಬ್ಬೊಬ್ಬರು ಚಿವುಟಿತೀಡುವುದು ಪ್ರಣಯ ಪ್ರಕಟನೆಯ ರೂಪಗಳೇ ಮನುಷ್ಯನು ಮಾತನಾಡಬಲ್ಲ ಪ್ರಾಣಿ. ಅವನ ಮಾತಿನ್ನೊಂದಿಗೆ ಬುದ್ದಿಯ ಹಿನ್ನೆಲೆಯಲ್ಲಿ ಅನುಭವಗಳಿಂದ ಶೇಖರಿಸಲ್ಪಟ್ಟಿದೆ. ಸ್ಮರಣೆಗಳು ಅವನಿಗೆ ನೆರವಾಗುತ್ತವೆ. ಹೀಗಾಗಿ ವ್ಯಕ್ತಿ ಪ್ರೇಮದ ಬಯಕೆಗಳು ಹೆಣ್ಣುಗಂಡಿನೊಳಗೋ ಗಂಡು -ಹೆಣ್ಣಿನೊಳಗೋ, ಮೂಡಿದಾಗ ಅದರ ಪರಿಣಾಮ ಮಾತಿನಲ್ಲೂ ವ್ಯಕ್ತವಾಗುತ್ತದೆ. ಎಳೆತನದಿಂದ ಅಶ್ಲೀಲವೆನಿಸುವ ಮಾತು ಸಂಭಾಷಣೆ, ಕತೆ, ಹಾಸ್ಯ ಮಕ್ಕಳಿಗೆ ಮೆಚ್ಚಿಕೆಯಾಗುತ್ತದೆ. ಮಗು ಬೆಳೆದಂತೆ ಅದು ಪುಷ್ಠಿಗೊಳ್ಳುತ್ತದೆ. ಮನಸ್ಸಿನ ಹಿನ್ನೆಲೆಯಲ್ಲೆಷ್ಟೆಷ್ಟು ಹೆಚ್ಚಾಗಿ ಕಾಮಾಸಕ್ತಿ ತುಂಬಿರುತ್ತದೋ ಅಷ್ಟಷ್ಟು ಹೆಚ್ಚಾಗಿ ಮಾತಿನಲ್ಲೂ, ಸ್ಪರ್ಶ ಚೇಷ್ಟೆಗಳಲ್ಲಿಯೂ ಈ ಸ್ವಭಾವ ಪ್ರಕಟಗೊಳ್ಳುತ್ತದೆ''.

ಕಾರಂತರ ಮರಳಿ ಮಣ್ಣಿಗೆ ಕಾದಂಬರಿಯಲ್ಲಿ ಅಣ್ಣ ತಂಗಿಯರ ಸಂಬಂಧ ಅನ್ಯೋನ್ಯವಾಗಿದ್ದು ಮಾನವೀಯ ಸಂಬಂಧಗಳ ಹೊಣೆಗಾರಿಕೆಯಿಂದ ಸಂತುಷ್ಟಗೊಂಡಿದೆ. ಲಚ್ಚನ ವಿದ್ಯಾಭ್ಯಾಸವು ಮುಂದುವರೆಸಲು ಐತಾಳರು ತನ್ನ ಮಾವನ ಮನೆಯಲ್ಲಿ ಇರಿಸಿರಲು ತಂಗಿಯೂ ಈ ಕೆಳಗಿನ ಮಾತುಗಳಿಂದ ಅಭಿವ್ಯಕ್ತಪಡಿಸುತ್ತಾಳೆ''. ''ಅಣ್ಣ, ಪರರ ಋಣದಲ್ಲಿ ಮಕ್ಕಳನ್ನು ಬೆಳೆಯಿಸುವುದು ಒಳ್ಳೆಯದಲ್ಲ. ನಿನಗಿರುವುದು ಒಬ್ಬನೇ ಗಂಡು ಮಗು. ನಾಳೆ ಲಚ್ಚನಿಗೆ ಅಜ್ಜನ ಮನೆ ಗುರುತು ಉಳಿದೀತೇ ವಿನಾ ನಿನ್ನ ನೆನಪು ಉಳಿಯಲಾರದು''[೧] ಎಂದಳು. (ಪು- ೧೪೫)

''ಪಾರೋತಿಯಂತು ಈಗ ಮುದುಕಿಯಂತೆಯೇ ಕಾಣಿಸುತ್ತಾಳೆ. ಎಲ್ಲಿಲ್ಲದ ಯೋಚನೆಗಳಿಂದ ಅವಳ ಕೂದಲು ನೆರೆತಿದೆ. ಮನೆಗೆ ಲಚ್ಚ ಬಂದರೆ ಮೊದಲಿನಂತೆಯೇ

ಮಾತನಾಡಿಸುತ್ತಾಳೆ. ಆದರೆ ಈಗ ಲಚ್ಚನ ಪ್ರೇಮ ಎಲ್ಲರ ಕಡೆಗೂ ಉದಾಸೀನ ಭಾವದಿಂದಲೇ ಕೂಡಿಕೊಂಡಿದೆ. ಸತ್ಯಭಾಮೆಯು ಎರಡು ಮಕ್ಕಳ ತಾಯಾಗಿ, ಇಬ್ಬರಿಂದಲೂ ದೂರವಿದ್ದು, ಮನೆಯ ಕೆಲಸಗಳಲ್ಲಿ ನುಗ್ಗಾಗುತ್ತಿದ್ದಾಳೆ. ಐತಾಳರಿಗೂ ವಯಸ್ಸಾಯಿತು. ಪಾರೋತಿಯು ತುಂಬ ದಣಿದಳು. ಸರಸೋತಿಗೆ ಪ್ರಾಯ ಸಂದರೂ ಅವಳ ಚುರುಕುತನ ಕಡಿಮೆಯಾಗಿಲ್ಲ. ಮನೆಯೊಳಗೆ ಅವರವರು ಅವರವರಿಗೆ ಮಾಡಿದ ಕೆಲಸ ಮಾಡುತ್ತಲೇ ಇರುತ್ತಾರೆ. ಆದರೂ ಎಳೆಯವಳಾದಸ'ತ್ಯಭಾಮೆಯ ಮೇಲೆ ಬರಿಯ ಕೆಲಸಗಳೇ ಸಾಕಷ್ಟು ಹೊರೆಯಾಗಿವೆ. ''ಅಯ್ಯಪ್ಪ! ಎಂದಿಗೆ ಮುಗಿಯುತ್ತದೋ ಈ ಸಂಸಾರ!' ಎಂದೂ ಅವಳು ಅನ್ನತೊಡಗಿದ್ದಾಳೆ. ಜೀವಕ್ಕೆ ಗೆಲುವನ್ನು ಕೊಡುವ ಮಕ್ಕಳು ಸಮೀಪವಿಲ್ಲ ಇದ್ದವರೂ ದೊಡ್ಡವರಾದವರಲ್ಲ. ಏನೋ ಸುಬ್ಬಿಯು ತನ್ನ ಗಂಡನ ಮನೆಯಿಂದ ತಮ್ಮ ಮನೆಗೆ ಬಂದಾಗ ಮಾತ್ರ ಮಗಳ ಮೇಲೆ ಮಮತೆಯನ್ನು ತೋರಿ ಉತ್ಸಾಹವಾಗಿರುತ್ತಾಳೆಯೇ ಹೊರತು ಇಲ್ಲವಾದರೆ ಮಿಕ್ಕವರಂತೆಯೇ ಅವಳು''[೨] (ಪು-೧೬೪)

ಪಾರೋತಿ ಮತ್ತು ಸತ್ಯಭಾಮೆಯರು ಲಚ್ಚನ ಮೇಲೆ ಇಟ್ಟಿರುವ ಪ್ರೀತಿ ದೂರವಾದಂತೆಲ್ಲ ಅವರ ಏಕಾಂತತೆ ಹೆಚ್ಚಾಗಿ ಮದುವೆಯಾದ ಸುಬ್ಬಿಯನ್ನು ನೆನೆಯುವಂತಹನ್ನು ಕಾಣಬಹುದು. ರಾಮ ಐತಾಳರು ಸುಬ್ಬಿಯ ವರನಿಗಾಗಿ ಅಲೆದು ಸುಸ್ತಾಗಿ ಬೆಂಡಾದರೂ ತನ್ನ ಮಗ ಲಚ್ಚ ಸಹಾಯವನ್ನು ಮಾಡಲಿಲ್ಲ. ಲಚ್ಚನ ಇಂಗ್ಲಿಷ್ ವಿದ್ಯಾಭ್ಯಾಸವನ್ನುಕಂಡು ಐತಾಳರ ಸಮಕಾಲೀನದ ಶೀನಮಯ್ಯ ಆ ಇಂಗ್ಲಿಷರ ಮನೆಯ ಹುಡುಗಿಯನ್ನು ಯಾರು ಮದುವೆಯಾಗುತ್ತಾರೋ ? ಎಂದುಕೊಂಡು ನುಡಿಯನ್ನು ನುಡಿದ. ಜನಸಾಮಾನ್ಯರು ಸಹ ವ್ಯಂಗ್ಯಮಾಡಿದ್ದು -ತನ್ನ ಮಗಳು ಗರ್ಭಿಣಿಯಾದಾಗ ನಡೆಸುವ ಉಪಚಾರವನ್ನು ಹೊರುವ ಸನ್ನಿವೇಶವನ್ನು ಕೆಳಗಿನ ಸನ್ನಿವೇಶದಲ್ಲಿ ಗೊತ್ತಾಗುತ್ತದೆ. ''ಐತಾಳರು ಆಸ್ತಿಯನ್ನು ಬೆಲೆಗೆ ಕೊಂಡು ಎಂಟು ದಿವಸಗಳಲ್ಲಿ ಗರ್ಭಿಣಿಯಾದ ಸುಬ್ಬಿಯು ತವರಿಗೆ ಬಂದಳು. ಅವಳ ಉಪಚಾರದಲ್ಲಿ ಐತಾಳರು ಲಚ್ಚನ ತಾಯಿ, ದೊಡ್ಡತಾಯಿ, ಅತ್ತೆಯರು ತೋರಿದ ಆದರಗಳನ್ನು ಹೇಳತೀರದು. ಅವಳ ಬಯಕೆಗಾಗಿ ಮಾಡದಂಥ ಕಚ್ಚಾಟವಿರಲಿಲ್ಲ. ಸಲ್ಲಿಸದಂಥ ಉಪಚಾರವಿರಲಿಲ್ಲ.''[೩] (ಪು- ೧೬೯)

''ಸರಸೋತಿಯು ಬೇಡಾ ಅಣ್ಣಾ, ಒಳ್ಳೆಯ ಸುದ್ದಿಯನ್ನು ದೊಡ್ಡವರೇ ಹೋಗಿ ಹೇಳಬೇಕು'' ನೀನು ಇಲ್ಲಿಯೇ ಇರು ಬಾಣಂತಿಗೆ ನಂಜುಗಿಂಜು ಮೀರಿದರೆ ಮದ್ದುಗಿದ್ದು ಮಾಡಿಸುವವರು ಬೇಡವೇ ? ನಾನು ಹೋಗಿಬರುತ್ತೇನೆ'' [೪] ಎಂದು ಹೊರಟೇಬಿಟ್ಟಳು. (ಪು- ೧೭೦)

ಐತಾಳರು ಸುಬ್ಬಿಯ ಬಯಕೆಯ ಸಮಯದಲ್ಲಿ ಲಚ್ಚನಿಗೆ ನಿನ್ನ ಭಾವನಿಗೆ ಮಂದವರ್ತಿಗೆ ಹೋಗಿ ಸುದ್ದಿಯನ್ನು ಮುಟ್ಟಿಸು ಎಂದಾಗ, ನನಗೆ ನಡೆಯಲಿಕ್ಕೆ ಸಾಧ್ಯವಿಲ್ಲ ಎಂದನು. ಆಗ ಸರಸೋತಿಯು ತಾನೇ ಹೋಗುತ್ತಾಳೆ.

''ಮರುದಿನ ಐತಾಳರು ಸರಸೋತಿಯನ್ನು ಕರೆದು ಸತ್ಯನ ಅಮ್ಮನಿಗೆ ಹುಷಾರಿಲ್ಲ' ಸೂರ ಬಂದು ಹೇಳಿದ. ನಾನು ಅವಳಿಗೂ ತಿಳಿಸಲಿಲ್ಲ. ಒಮ್ಮೆ ಏನೆಂದು ನೋಡಿಕೊಂಡು ಬರುತ್ತೇನೆ ನೀನು ಮನೆ ನೋಡಿಕೊಂಡಿರೆಂದು ಅವಳಿಗೆ ಎಚ್ಚರಿಕೆ ಹೇಳಿ ತಮ್ಮ ಕರ್ತವ್ಯ ನೆರವೇರಿಸಲು ಹೊರಟರು''[೫] (ಪು- ೧೭೦)

''ಅವರ ಅತ್ತೆಯೂ ಮೃತ್ಯುಶಯ್ಯೆಯಲ್ಲಿ ಹೊರಳಾಡುತ್ತಿದ್ದಳು. ಅವಳದು ಅರವತ್ತಕ್ಕೆ ಮೀರಿದ ವಯಸ್ಸು. ಅಷ್ಟರಲ್ಲೇ ವಾತದಿಂದುಂಟಾದ ಜ್ವರ ವೇದನೆಗಳಿಂದ ನರಳುತ್ತ ಸಾವನ್ನು ಇದಿರು ಕಾಯುತ್ತಿದ್ದಳು. ಶರೀರವೆಲ್ಲ ಸಾವಿನ ಕಡೆಗೆ ಅವಳನ್ನು ಒಯ್ಯುತ್ತಿದ್ದರೆ ಮನಸ್ಸು ಮತ್ತು ಇನ್ನೂ ಬದುಕಿರುವ ಹಟವನ್ನು ಹಿಡಿದಿದೆ. ಅಳಿಯನನ್ನು ಕಂಡು 'ರಾಮ' ಬಂದೆಯಾ ಎಂದಳು. ರಾಮ ನನಗೆ ಇದು ಗುಣವಾಗದೇನು ? ರಾಮ ಸುಬ್ಬಿಯ ಮಗುವನ್ನು ಕಾಣಬೇಕಿತ್ತು.' ಆಮೇಲೆ ನಾನು ಸತ್ತು ಬೂದಿಯಾದರೂ ಚಿಂತೆಯಿಲ್ಲ' ಎಂದು ಹಂಬಲಿಸಿದಳು.''[೬] (ಪು-೧೭೦-೧೭೧)

ರಾಮ ಐತಾಳರು ತನ್ನ ಅತ್ತೆಗೆ ಹುಷಾರಿಲ್ಲವೆಂದು ತಿಳಿದು ತೆಗೆದುಕೊಳ್ಳುವ ಜವಾಬ್ದಾರಿ ನಿಜವಾಗಿಯೂ ಮಾನವೀಯ ಅಂತಃಕರಣದ್ದು ಅಂದಿನಿಂದ ಐತಾಳರು ನಿತ್ಯವೂ ತನ್ನೂರಿನಿಂದ ಅತ್ತೆಯೂರಿಗೂ, ಅತ್ತೆಯೂರಿನಿಂದ ತನ್ನೂರಿಗೆ ತಿರುಗಿದ್ದು ''ಸುಬ್ಬಿಗೆ ಅಜ್ಜಿ ಗತಿಸಿದುದನ್ನು ಕೇಳಿ ಎಲ್ಲಿಲ್ಲದ ವ್ಯಥೆಯಾಯಿತು. ನನ್ನ ದುರ್ದೈವವೇ! ಎಂದುಕೊಂಡಳು ಆಕೆ. ಸರಸೋತಿಯು ಬಂದು ನಿನ್ನ ಮಗನಿಂದಾಗಿ ಸಮಾಧಾನ ಪಡಿಸಿದಳು.'' [೭] (ಪು-೧೭೨)

ಸುಬ್ಬಿಗೆ ತನ್ನ ಅಜ್ಜಿ ಗತಿಸಿದ್ದುದು ತುಂಬಾ ವ್ಯಥೆಯನ್ನು ತಂದುಕೊಟ್ಟಿತು. ''ಸಾವಿನ ಗಳಿಗೆಯಲ್ಲಿ ಐತಾಳರೂ, ಸತ್ಯ, ಪಾರೋತಿಯರ ಸೇವೆ ಮಾಡುತ್ತಿದ್ದರು. ಐತಾಳರು ತಾವಾಡಿದ ಎಷ್ಟೋ ಕಟುನುಡಿಗಳನ್ನು ನಡೆದುಕೊಂಡು ಅತ್ತರು. ನನ್ನಿಂದ ನಿನಗೆ ಏನೇನು ಕಷ್ಟವಾಗಿತ್ತೋ...ಎಂದು ನುಡಿದರು. ಕೊನೆಯ ತನಕ ನಿತ್ರಾಣಿಯಾಗಿದ್ದರೂ ಆಕೆಗದೆ ಚಿಂತನವಿತ್ತು. ನೀವು ಅಂಥ ಮಾತನಾಡಬಾರದು.....ನೀವು ಸತ್ಯನು ಮನೆಗೆ ತರದೇಹೋಗಿದ್ದರೆ ನನಗೆ ಶ್ರಾದ್ಧಕ್ಕೆ ಯಾರು ಗತಿಯಾಗುತ್ತಿದ್ದರು ? ಎಂದಳು. 'ಮರುಗಳಿಗೆ ಲಚ್ಚ ಬಂದನೇ ?' ಎಂದು ತಿಳಿದಳು. 'ಬಂದಾನು' ಎಂಬ ಉತ್ತರ ಬಂದಿತು. ಹಾಕಲೇ ನಾರಾಯಣ ಎನ್ನುವ ತ್ರಾಣವಿದೆಯೇ ಅನ್ನುತ್ತೀಯಾ ? ಎಂದು ಕೇಳಿದಳು. ಸತ್ಯಭಾಮ ಆಗ ಎದುರಿಗೇನೆ ಇದ್ದಳು. ಐತಾಳರು ದೇವರ ಕೋಣೆಯಲ್ಲಿ ಜಪ ಮಾಡುತ್ತಿದ್ದರು. ಪಾಪ ಆ ಗಳಿಗೆಯಲ್ಲಿ ಸತ್ಯಭಾಮೆಗೆ ತನ್ನಿಂದ ಈ ಜೀವ ಎಷ್ಟೊಂದು ನೊಂದಿರಬಹುದು ಎಂಥ ಮೂಕ ಸಂಕಟ ಅನುಭವಿಸಿರಬಹುದು ಎಂಬ ಕಳವಳವಾಯಿತು''.[೮] (ಪು- ೧೯೨-೧೯೩)

ಐತಾಳರು ಪಶ್ಚಾತ್ತಾಪದ ನೋವು ವ್ಯಕ್ತವಾಗುವುದನ್ನು ಕಾಣಬಹುದು. ಅಣ್ಣನಿಗೆ ವಯಸ್ಸಾದುದನ್ನು ತಿಳಿದು ಅವರು ಆಸೆಪಟ್ಟುಕೊಂಡು ಸಾಯಬಾರದಗುಎಂಬುದರಿಂದ ''ಅಣ್ಣಾ ನನ್ನ ಅಡ್ಡಿಯುಂಟೆಂದು ತಿಳಿಯಬೇಡ. ಮನೆಗೆ ಓಡ್ಲು ಹಾಕಿಸುವುದಾದರೆ ಹಾಕಿಸು.''[೯] (ಪು- ೨೦೦) ರಾಮ ಐತಾಳರ ತಂಗಿಯೂ ಸರಸೋತಿ ತನ್ನ ಅಣ್ಣನ ಮನೋ ಇಂಗಿತವನ್ನು ಅರ್ಥೈಸಿಕೊಂಡು ತನ್ನ ಹೊಣೆಗದಾರಿಕೆಯನ್ನು ನಿಭಾಯಿಸುವುದನ್ನು ಕಾಣಬಹುದು.

''ಅಣ್ಣ ನನಗೆ ಬೇರೆಯೇ ಕಾಣುತ್ತದೆ. ನಿನ್ನ ಅನಂತರ ಇದೆಲ್ಲ ಯಾರಿಗೆ ಎಂದು? ಕೊನೆಗೆ ಯೋಚಿಸಿದರೆ ಹಣ ನಗದು ಉಳಿದರೆ ಲಚ್ಚ ನೀನು ಉಳಿಸಿದ ಒಂದು ಕಾಸನ್ನು ಇರಿಸಲಾರ. ಆದ್ದರಿಂದ ಮನೆಯ ಮೇಲಾದರೂ ಅಷ್ಟು ಹಣ ಬೀಳಲಿ. ಉಳಿದುದನ್ನ ಆಸ್ತಿಗೋ, ಸೊಸೆಯಚಿನ್ನಕ್ಕೋ ಹಾಕಿಬಿಡು. ನಿನಗೆ ಮನಸ್ಸು ಬಂದರೆ ಸುಬ್ಬಿಗೂ ಒಂದಿಷ್ಟು ನಗ ಮಾಡಿಸಿಕೊಡು. ಅವಳೂ ನಿನ್ನ ಹೊಟ್ಟೆಯ ಮಗು ಅಲ್ಲವೇ? ಎಂದಳು. ಮಗಳಿಗೆ ಚಿನ್ನ ಮಾಡಿಸಿಕೊಡುವ ವಿಷಯದಲ್ಲಿ ಸತ್ಯಭಾಮೆಯು ಅನುಕೂಲವಾದಳು.''[೧೦] (ಪು-೩೦೦).

ಸರಸೋತಿ ಅಣ್ಣನ ಜವಾಬ್ದಾರಿ ಬಗ್ಗೆ ಮಾತನಾಡುವ ಮತ್ತು ಹಣವನ್ನು ಯಾರಿಗೆ ಯಾವುದಕ್ಕೆ ಖರ್ಚು ಮಾಡಬೇಕೆಂದು ಹೇಳುತ್ತಾಳೆ. ಹಾಗೂ ''ನನ್ನ ದುರ್ದೈವದಿಂದಾಗಿ ನಿಮ್ಮ ಮಗಳು ದಾರಿಯಲ್ಲಿ ಬಿದ್ದಂತೆ ಕಾಣುತ್ತದೆ. ಅವನ್ನೊಂದು ಹಾದಿಗೆ ತರುವುದಕ್ಕೆ ನಿಮಗೂ ಶಕ್ತಿಯಿಲ್ಲದೆ ಹೋಯಿತೇ ಹೋಗಲಿ ದೇವರು ನಡೆಯಿಸಿದ್ದಾಗುತ್ತದೆ. ಅವನಿಗೆ ಒಂದು ಸಂಗತಿ ತಿಳಿಸುತ್ತೇನೆ.' ನಿಮಗೆ ಇಚ್ಛೆಯಿದ್ದಲ್ಲಿ ನನ್ನ ಸೊಸೆಗೆ ಯಾವ ಕೊರತೆಯೂ ಆಗದಂತೆ ಮನೆಯಲ್ಲಿ ನೋಡುತ್ತೇನೆ. ನನ್ನ ಆಸ್ತಿಯಲ್ಲಿ ಹೆಚ್ಚಿನದು ನನ್ನ ಸ್ವಾಮೀಜಿ ಎಂದು ತಿಳಿಸಿದರೂ ಮಗನ ಮುಖ ಕಾಣುವ ಹಂಬಲ ತಪ್ಪಿದ್ದಕ್ಕೆ ಸೊಸೆಯ ಮುಖವನ್ನಾದರೂ ಕಾಣುವ ಯೋಗ ನನಗೆ ಕೊಡಿಸುತ್ತೀರಾ ? ಎಂದು ಬೇಡಿ ಕಾಗದವನ್ನು ಬರೆಸಿದರು.''[೧೧] ( ಪು- ೨೦೪)

ರಾಮ ಐತಾಳರ ಮಗ ಲಚ್ಚ ತನ್ನ ಹೆಂಡತಿಯ ಜವಾಬ್ದಾರಿಯನ್ನು ಹೊರದೆ ನಡುನೀರಿನಲ್ಲಿ ಕೈಬಿಟ್ಟ. ಈಗಾಗಲೇ ಅವನಿಗೆ ಸ್ತ್ರೀ ರೋಗ ಅಂಟಿಕೊಂಡಿತ್ತು. ತನ್ನ ನೋವನ್ನು ಮನಗಂಡು ಮೇಲಿನ ಸಂದರ್ಭದಲ್ಲಿ ಹೇಳಿರುವಂತೆ ಹೊಣೆಯನ್ನು ಹೊತ್ತುಕೊಳ್ಳುತ್ತಾನೆ.

''ಸುಬ್ರಾಯ ಉಪಾಧ್ಯಾಯರು 'ಇವತ್ತು ಕಳೆಯುವುದು ಹೇಗೋ ? ಇವತ್ತು ಕಳೆದರೆ ಇನ್ನೂ ನಾಲ್ಕು ವರ್ಷಕಾಲ ಬದುಕಬಹುದು ಎಂದರು. ಶೀನಮಯ್ಯರಿಗೂ ಆ ಸುದ್ದಿ ಮುಟ್ಟಿತು. ಅವರ ಮನಸ್ಸು ಚಂಚಲವಾಯಿತು. 'ಅವನೆಂದು ಘಟಿಂಗನೇ ಆದರೂ ಸಾಯುವ ಕಾಲಕ್ಕೆ ಕಾಣದೆ ಇರಬಾರದು'ಎಂದು ಕಡಲಿನ ದಂಡೆಯಿಂದ ತಮ್ಮ ಮನೆಗೆ ಹೋದವರು. ಅಲ್ಲಿಂದ ತಿರುಗಿ ಮುಖ ತಗ್ಗಿಸಿಕೊಂಡು ಐತಾಳರಲ್ಲಿಗೆ ಕಾಲಿರಿಸಿದರು. ಐತಾಳರು ಒಮ್ಮೆ ಸ್ಮೃತಿಯಿಂದ ಕಣ್ತೆರೆಯುವಾಗ ಎದುರಿಗೆ ಶೀನಮಯ್ಯರು ನಿಂತಿದ್ದರು. 'ಯಾರು? ಶೀನನೇ ಎಂದರು. 'ಅಹುದು ಐತಾಳರೇ' ಎಂಬ ಉತ್ತರ ಬಂದಿತು. ನಾನು ಸತ್ತ ಮೇಲಾದರೂ ಹಗೆ ಬಿಟ್ಟು ನನ್ನ ಮಗನಿಗೆ ನಾಲ್ಕು ಬುದ್ದಿಯ ಮಾತು ಹೇಳುತ್ತೀಯಾ? ಎಂದರು. ಶೀನಮಯ್ಯರು ಮಗುವಾದರು. ಐತಾಳರ ಕಾಲನ್ನು ಹಿಡಿದರು. ''ನಾನೇನು ಆಡಿದ್ದರೂ ಕ್ಷಮಿಸಬೇಕು'' ಎಂದು ಅತ್ತರು.[೧೨] (ಪು- ೨೦೫).

ರಾಮ ಐತಾಳರ ಅಸ್ವಸ್ಥತೆಯನ್ನು ಕಂಡು ಸಾವಿನಗಳಿಗೆಯಲ್ಲಿ ಬಂದ ಶೀನಮಯ್ಯನಿಗೆ ತನ್ನ ಮಗನಿಗೆ ಬುದ್ದಿ ಹೇಳು ಎನ್ನುವುದರ ಮೂಲಕ ದ್ವೇಷದ ವಿಷಯವನ್ನು ಮರೆತು ಇಬ್ಬರಲ್ಲಿ ಕರುಣೆಯ ಸಂಗೀತವು ಉಕ್ಕಿತು. ''ನಾರಾಣಯ್ಯ

ಬಂದು ನಾಗವೇಣಿಯನ್ನು ತಮ್ಮ ಮನೆಗೆ ಕರೆದೊಯ್ಯಲು ಯೋಚಿಸಿದರೆ ಆ ಮಾತಿಗೆ ನಾಗವೇಣಿ ಒಪ್ಪಿಗೆ ಕೊಡದಾದಳು. ಕೆಲವು ದಿನವಾದರೂ ಸರಸೋತಿಯ ಸ್ನೇಹ, ಸ್ವಭಾವಗಳನ್ನು ನೋಡಿದ ಆಕೆಯನ್ನು ತಾನು ಇಂಥ ಪ್ರಸಂಗದಲ್ಲಿ ಬಿಟ್ಟು ಹೊರಡುವುದು ತಪ್ಪೆಂದು ತೋರಿತು. ಮಾವನ ಮನೆಯಲ್ಲಿ ಸರಸೋತಿಯ ವಿಚಿತ್ರ ಚೇತನ ತುಂಬಿರುವಷ್ಟು ಕಾಲ ಅನನ್ಯ ಭಕ್ತಿ ನಾಗವೇಣಿಗೆ ಆ ಮನೆಯನ್ನು ಕುರಿತು ಉಂಟಾಯಿತು.'' [೧೩] (ಪು- ೨೦೮)

ನಾಗವೇಣಿಯಲ್ಲಿ ಹಳೆತಲೆಮಾರಿನ ಮೌಲ್ಯಗಳು ದೂರವಾಗಿದ್ದರೂ ಆಧುನಿಕ ಮೌಲ್ಯಗಳೊಂದಿಗೆ ಬೆರೆತು ಅವಳ ಮಾನವೀಯ ಅಂತಃಕರಣ ಜಗತ್ತು ವಿಸ್ತಾರಗೊಂಡಿದೆ. ಅದಕ್ಕಾಗಿಯೇ ಅವಳು ತನ್ನ ಚಿಕ್ಕಪ್ಪ ನಾರಾಯಣಯ್ಯ ಸರಸೋತಿ ಮತ್ತು ಸತ್ಯಭಾಮೆಯೊಂದಿಗೆ ಮಾನವ ಇರುವ ಸ್ಥಳದಲ್ಲೇ ಇರಬಾರದೆಂದು ಹೇಳಿದರೂ ಸಹ ಅವಳು ಅವರೊಂದಿಗೆ ಮಾವನ ಪಿತ್ರಾರ್ಜಿತ ಕುಟೀರದಲ್ಲೇ ವಾಸಿಸತೊಡಗುತ್ತಾಳೆ. ''ಸರಸೋತಿಯು ನಾಗವೇಣಿಗೆ ಮಗು ನೀನು ನನ್ನನ್ನು ನಂಬಿ ಯಾಕೆ ಇಲ್ಲಿ ನಿಲ್ಲುತ್ತೀ ? ಎಂದಳು. ನಾಗವೇಣಿಯು ಕಣ್ಣೀರು ಕರೆದಳು. ಮಾವನ ಋಣ ತೀರಿಸುವುದಕ್ಕಾದರೂ ನಾನು ಇಲ್ಲಿರಬೇಡವೇ ? ಇನ್ನಾದರೂ ಅವರಿಗೆ ಒಳ್ಳೆಯ ಬುದ್ದಿ ಬಂದು ನನ್ನನ್ನು ಕರೆದುಕೊಂಡು ಹೋದರೆ ಹೋಗುತ್ತೇನೆ. ಕರೆದರೆ ನಮ್ಮಿಬ್ಬರನ್ನು ಕರೆಯಲಿ. ಇಲ್ಲವಾದರೆ ನೀವಿರುವ ತನಕ ನಾವು ಇಲ್ಲಿಯೇ ಇರುತ್ತೇನೆ ಎಂದಳು'' [೧೪] (ಪು- ೨೦೮)

''ಕಾಶಿಗೆ ಹೋಗಿ ಬರಬೇಕು ಅನ್ನುತ್ತಾರೆ. ಬಾಯನ್ನು ಸಮನಾಗಿ ತೆರೆಯುವ ಧೈರ್ಯವಿಲ್ಲ. ಈ ಕುರುಡು ಹೊರೆಯಾರು ಹೊರುವವರು ಅನ್ನುತ್ತಾರೆ. ಅವರ ಪುಣ್ಯದಿಂದಲಾದರೂ ನನ್ನ ಗ್ರಹಚಾರ ಪರಿಹಾರವಾದರೆ''....ಎಂದಳು.

''ವಾಸುದೇವಯ್ಯನವರು ತುಸು ಸಮಯ ಮಾತನಾಡಲಿಲ್ಲ. ಕೊನೆಗೆ ಆಗಲಿ ಮಗು ನನಗೂ ಕೂದಲು ಬಿಳಿದಾಗುತ್ತ ಬಂತು. ನನ್ನ ವಕಾಲತ್ತು ಸದಾಶಿವನಿಗೆ ಬಿಡುತ್ತ ಬರುತ್ತಿದ್ದೇನೆ. ನಿನ್ನನ್ನು ಕರೆದುಕೊಂಡು ಹೋಗುತ್ತೇನೆ. ಅವರನ್ನು ಕರೆದುಕೊಂಡು ಹೋಗುತ್ತೇನೆ.

''ಮರುದಿನ ನಾಗವೇಣಿಯು 'ಅಪ್ಪ ಕಾಶಿಗೆ ಹೋಗುತ್ತಾರಂತೆ. ನಮ್ಮಿಬ್ಬರನ್ನು ಕರೆದುಕೊಂಡು ಹೋದಾರು...ಎಂದು ಅನ್ನಲು ಸರಸೋತಿಯು 'ಮಗು ನನಗೆ ಅಷ್ಟು

ಕೇಳಿದರೆ ಸಾಕು. ನನ್ನಂಥ ಕುರುಡಿಯನ್ನು ಕಟ್ಟಿಕೊಂಡು ಅವರು ತೊಂದರೆ ಪಡುವುದು ಬೇಡ. ನಾನು ದಾರಿಯಲ್ಲಿ ಸತ್ತರೇನು ಗತಿ! ನನ್ನಿಂದ ಯಾರಿಗೂ ತೊಂದರೆಯಾಗದಿದ್ದರೆ , ಅದೂ ಒಂದು ಕಾಶಿಯಾತ್ರೆಯಲ್ಲವೇ ? ಸತ್ಯ, ನೀನು ಹೋಗು ಮಗ, ಎಂದಳು. ಸತ್ಯಭಾಮೆಯು ಸಂತೋಷ ಪಟ್ಟಳು. ಆದರೆ, ಮನೆಯಲ್ಲಿ ಯಾರು...ಎಂಬ ಯೋಚನೆ ನಾಗವೇಣಿಯ ಆಗ್ರಹ ಮೀರಿತು. ಏನೋ. ಆಗಲ್ಲ ನೀವಿಬ್ಬರೂ ಹೋಗಬೇಕು. ಕಣ್ಣೀರಿನಿಂದ ಅವಳು ಹಿರಿಯರನ್ನು ಬಲವಂತಪಡಿಸಬೇಕಾಯಿತು.''[೧೫] ( ಪು-೨೨೨).

ಸರಸೋತಿಯ ಕೊನೆಗಳಿಗೆಯಲ್ಲಿ ತನ್ನ ಅಣ್ಣನ ಮನೆಯ ಹೆಬ್ಬಾಗಿಲಿನ ಆಸೆಯ ಬಗ್ಗೆ ಅರಿವು ಮೂಡಿಸಿ ಪೂರೈಸಿದರೆ ನಾಗವೇಣಿ ಸರಸೋತಿಯ ಕಾಶಿಯಾತ್ರೆ ಬಯಕೆಯನ್ನು ತನ್ನ ಚಿಕ್ಕಪ್ಪನಿಂದ ಪೂರೈಸಿದಳು ಇವಳು ಮಾನವೀಯ ಅಂತಃಕರಣ ಹೊಣೆಗಾರಿಕೆ ಸದಾ ನೆನೆಯುವಂತಹದ್ದಾಗಿದೆ.

ಅವಳ ಚಿಕ್ಕತಂದೆಯ 'ಒಂದು ರಾತ್ರಿ ನಿಂತು ಹೋಗು, ಅಲ್ಲಿ ನಿಮ್ಮ ಮನೆಗೆ ಆಳುಗಳನ್ನು ಕಳುಹಿಸುತ್ತೇನೆ.' ಎಂದರೆ 'ಮನೆಯ ದೇವರಿಗೆ ದೀಪವನ್ನು ನಾನೇ ಹಚ್ಚಬೇಕು. ಅತ್ತೆಯವರು ಇದ್ದ ಯಾವ ಒಂದು ದಿನವೂ ತಪ್ಪಿಸಲಿಲ್ಲ. ಆ ಕೆಲಸ ನನಗೆ ವಹಿಸಿದ್ದಾರೆ. ಹೋಗುವಾಗ ಅದೊಂದನ್ನಾದರೂ ನಾನು ಮಾಡಬೇಡವೇ ?''[೧೬] ಎಂದಳು (ಪು-೨೨೨)

ಕಾಶಿಗೆ ಹೊರಟರೆ ಮನೆಯಲ್ಲಿ ಯಾರಿರಬೇಕೆಂಬ ಚರ್ಚೆ ಆರಂಭವಾಯಿತು. ನಾಗವೇಣಿಯೇ ಸರಸೋತಿ ಮತ್ತು ಸತ್ಯ .......ಇರುತ್ತೇನೆಂದು ಹೇಳಿ ಅವರನ್ನು ಬಲವಂತ ಮಾಡಿ ಕಳುಹಿಸಿದಳು. ಚಿಕ್ಕಪ್ಪ ನೀನು ನಮ್ಮ ಮನೆಯಲ್ಲೇ ತಂಗು ನಾನು ಇಲ್ಲಿಗೆ ಆಳುಕಳುಹಿಸುತ್ತೇನೆ.''ಎಂದಾಗ ಅವಳ ಮಾತುಗಳು ಮೇಲಿನ ಸಂದರ್ಭದಲ್ಲಿ ವ್ಯಕ್ತವಾಗಿವೆ.

''ಅದೇ ನನ್ನ ಮನೆಯಲ್ಲಿ ನಾನು ತಿರುಕ ಎಂದೆನಲ್ಲ ನೀನು ಅ ರ್ಜಿಹಾಕಿ ನಿನ್ನ ಹಣ ಸೆಂಕ್ಷನ್ ಮಾಡಿ ನನ್ನ ಕಾಯಿಲೆ ಗುಣವಾಗುವಾಗ ಅರ್ಧ ಸ್ಮಶಾನಯಾತ್ರೆ ನಡೆಯುತ್ತದೆ ಎಂದನು.

''ನಾಗವೇಣಿಯು ಔಡು ಕಚ್ಚಿದಳು. ಈಗಾಗಲೇ ಕೆಲವು ಸ್ಮಶಾನಯಾತ್ರೆಗಳಿಗೆ ಅವಳು ಸಾಕ್ಷಿಯಾದವಳು. ತನ್ನ ಕುಂಕುಮವು ಅಳಿಸುವ ಮಾತು ಬರುತ್ತಲೇ ಅವಳ ಶರೀರದಲ್ಲಿ ಮಿಂಚೊಂದು ಹರಿದಂತಾಯಿತು. ಆ ದಿನವೆಲ್ಲ ಅವಳು ಮೂಕಿಯಂತಾದಳು.

ಮರುದಿನ ಬೆಳಿಗ್ಗೆ ತನ್ನೊಂದು ಜತೆ ಬಳೆಗಳನ್ನು ಕಳಚಿ ಇಗೊಳ್ಳಿ' ಹಗಿ ಮದ್ದು ಮಾಡಿಸಿಕೊಂಡು ಬನ್ನಿ ಇಲ್ಲೇ ಬಂದು ಇರಿ ಏನು. ಪಥ್ಯ ಉಪಚಾರ ಆಗಬೇಕೇನು ನಾನು ಮಾಡುತ್ತೇನೆ. ಹಾಲು ಹೈನಿಲ ಬೇಕಾದರೆ ಇನ್ನೊಂದು ಕಡೆ ಸಿಗಲಾರದು ಎಂದು ಕೊಟ್ಟಳು.''[೧೭] (ಪು-೨೨೭).

ನಾಗವೇಣಿಯ ಗಂಡ ಲಚ್ಚ ಅಂತರ್ ಪಿಶಾಚಿ, ಪೀಡಿಸಿದ್ದಂತೆ ಸಮಯ ಸಂದರ್ಭವನ್ನರಿತು ತನ್ನ ಆಸೆಯನ್ನು ಪೂರೈಸಿಕೊಳ್ಳುವುದಕ್ಕಾಗಿ ಆಗಾಗ್ಗೆ ಮನೆಗೆ ಬೇಟಿಕೊಡುತ್ತಿದ್ದನು. ಬೇಟಿಯ ಕಾರ್ಯ ಸಫಲವಾಗುವವರೆಗೂ, ತೊಲಗುವುದಿಲ್ಲ. ಅಂತಹ ಸಂದರ್ಭದ ಮಾತುಗಳು ಮೇಲಿನ ಮಾತುಗಳಲ್ಲಿ ವ್ಯಕ್ತವಾಗಿವೆ.

ಸರಸೋತಿ, ತನ್ನ ಕುರುಡಿನಿಂದ ಕಾಶಿಯಾತ್ರೆಯಿಂದ ಹಿಂತಿರುಗಿ ''ಮಗು, ನಾಗವೇಣಿ, ನಿನ್ನಪ್ಪ ನಡೆಯಿಸಿ ಕೊಟ್ಟರು. ನೀನುನ ನ್ನ ಆಸೆಯನ್ನು ನೆರವೇರಿಸಿದೆ. ಆ ಪುಣ್ಯ ನಿನಗೆ ಎಂದು ಬಾರದೆ ಹೋಗದು ಮಗಳೇ ,ಎಂದು ಮೇಲಿಂದ ಮೇಲೆ ಹರಸಿದಳು.''[೧೮] (ಪು- ೨೨೮) ಸರಸೋತಿಯು ''ಹ್ಯಾಗಿದ್ದೀ? ಬಂದ ಮೇಲೆ ಅವನು ಇದ್ದೇನೆ'' ಬದುಕಿ ಯಾರಿಗೂಬೇಡಾಗಿ ಯಮಧರ್ಮನಿಗೂ ಬೇಡಾಗಿ ಎಂದನು ಆಕೆಯು ನೊಂದುಕೊಂಡಳು. ಯಮಧರ್ಮ ನಮ್ಮಂಥವರಿಗೆ ನಿನ್ನ ಹಾಗೆ ಪ್ರಾಯದ ಹುಡುಗರಿಗೆ ಅಲ್ಲ ಎಂದಳು.

ಅದು ನಂಜಿನ ನುಡಿಯೆಂದು ನಾಗವೇಣಿಯು ಮನಗಾಣಳೇ ? ಆ ಸಂಜೆ ಅವಳು ಲಚ್ಚನು ಎದುರಾದಾಗ ಯಾಕೆ ಅವರೆದುರಿಗೆ ಹಾಗೆಂದಿರಿ? ನಿಮ್ಮ ಸಾವನ್ನು ಈ ಮನೆಯಲ್ಲಿ ಯಾರು ಹಾರೈಸಿದರು ? ನೀವು ಅವರಿಗೆ ಆಡುವ ಮಾತೇ ಇದು ? ' ಎಂದಳು. ಲಚ್ಚನಿಗೆ ಕೆರಳಿತು. ಆಸ್ತಿಯ ಸೊಕ್ಕಿನಿಂದ ನೀನು ನನಗೆ ಬುದ್ದಿ ಹೇಳುತ್ತೀಯಾ ? ನಿನಗೆ ಬುದ್ದಿ ಹೇಳುವುದು ಎಷ್ಟರ ಕೆಲಸ....?

ನಾಗವೇಣಿಯ ಮುಖ ಬಿಗಿದಳು. ಯಾಕೆ ಎಲ್ಲಿಂದೆಲ್ಲಿಗೆ ಹೋಗುತ್ತೀರಿ ? ಅವರನ್ನು ನೋಯಿಸಬಾರದು ಎಂದು ನಾನೆಂದೆ....?.

''ನೀನು ಮನೆಯ ಯಜಮಾನಿ ಎಂಬುದು ಗೊತ್ತಿದೆ. ನನಗೆ ಅಲ್ಲವಾದರೆ ನನಗೆ ಅಂದು ತೊಂದರೆಯಿದ್ದಾಗ ೩೦೦-೪೦೦ ರೂಪಾಯಿ ಕಳುಹಿಸಲಿಕ್ಕೆ ಖುಷಿ ಪಡದೆ ನನ್ನನ್ನು ದೇಶಾವರಕ್ಕೆ ಅಟ್ಟಿದಿರಿ. ಈ ವರ್ಷ ವನವಾಸಕ್ಕೆ ತಳ್ಳಿದಿರಿ. ಈಗ ನೋಡು, ನಿನಗೆ ಬೇಕಾದವರಿಗೆ ಕಾಶಿ, ರಾಮೇಶ್ವರಗಳಿಗೆ ಹೋಗಿ ರಾಶಿ ಹಣ ಖರ್ಚು ಮಾಡಲು ಇರುತಾವ.

ವ್ಯಥೆಯಾಗಲಿಲ್ಲ. ಹಾಗಿರಲು ನಾನು ಯಮುನಿಗಲ್ಲದೆ ಇನ್ನಾರಿಗೆ ಸೇರಬೇಕು ? ನಾನು ಅನ್ನಬಾರದಿತ್ತು. ಆ ಮಾತನ್ನು ಆದರೂ ನರಳಿದ್ದೆಲ್ಲ ಒಳಕ್ಕೆ ತುಂಬಿರುವಾಗ ಗಂಟಲು ತೆರೆಯದೆ ಇರುತ್ತದೆಯೇ ?''[೧೯](ಪು- ೨೨೯)

ಲಚ್ಚನ ಅಮಾನವೀಯ ಗುಣಗಳು ಹೇಗೆ ತಾಂಡವವಾಡುತ್ತವೆ ಎಂಬುದನ್ನು ಮೇಲಿನ ಸಂದರ್ಭದಲ್ಲಿ ಕಾಣಬಹುದು.

''ಮಗೂ , ಅವನು ಎಂಥವನೇ ಆದರೂಕೈ ಹಿಡಿದ ಗಂಡ ಅವನಿಗೆ ಹಾಗೆನ್ನಬಾರದು. ನಾನು ಇರಲಿ ಇಲ್ಲದೇ ಇರಲಿ ನಿನಗೆ ಅವನ ಮೇಲೆ ವೈರ ಒಳ್ಳೆಯದಲ್ಲ! ಎಂದಳು.

ಲಚ್ಚನು ಅಲ್ಲಿಗೆ ಬಂದನು. ವಕೀಲರ ಮಗಳು ನೀನು ಕಾನೂನು ಬಹಳ ಗೊತ್ತಿರಬೇಕು. ಆಯಿತು ನಿನ್ನ ಹಕ್ಕಿನ ಮನೆಯಲ್ಲಿ ನೀನಿರು. ನಾನು ದೇಶಾವರಕ್ಕೆ ಹೋಗುತ್ತೇನೆ. ಎಂದನು. ಆ ರಾತ್ರಿ ಅವಳು ಮ ನೆಯಲ್ಲಿ ಊಟವನ್ನು ಕೂಡ ಮಾಡಲಿಲ್ಲ. ಹೊರಟೇ ಹೋದನು.''[೨೦] (ಪು-೨೩೦)

ನಾಗವೇಣಿಯು ತನ್ನ ಗಂಡನನ್ನು ನೊಂದು ನಿಂದಿಸುವುದು ಸರಿಯಷ್ಟೇ ಆದರೂ ಸರಸೋತಿಯ ಮಾತಿನಲ್ಲಿ ತನ್ನ ತಲೆಮಾರಿನ ತಲ್ಲಣಗಳು ಆಗಾಗ್ಗೆ ಗೋಚರಿಸಿ 'ಅಪ್ಪಹಾಕಿದ ಆಲದ ಮರಕ್ಕೆ ನೇಣು ಹಾಕಿಕೊಳ್ಳುವಂತೆ' ಲಚ್ಚ ಎಂಬ ಪ್ರಾಣಿಯನ್ನು ನಿಂದಿಸಬಾರದೆಂದು ಬೋಧಿಸುತ್ತಾಳೆ.

''ಸರಸೋತಮ್ಮ ಏನೋ ನಿಮ್ಮೊಳಗೆ ನಿಂದಿಸಬಾರದೆಂದು ದೇವರು ಹೊಸೆದು ಬೆಸೆದ ಹಾಗಿದೆ. ನಾನು ಅದನ್ನು ಕಡಿಯುವುದೂ ಇಲ್ಲ! ಕರಗಿಸುವುದು ಇಲ್ಲ. ಆದರೆ ಒಂದು ಹೇಳುತ್ತೇನೆ. ಒಂದು ದಿನ ಏನೂ ಸಹಾಯ ಬೇಕಿರಲಿ ಪರರನ್ನು ಕೇಳುವ ಬದಲು ನಮ್ಮ ಮನೆಯವರನ್ನು ಕೇಳಬೇಕು. ನಾನಿಲ್ಲವಾದರೆ ಊರಲ್ಲಿ ನಾರಾಯಣ ಇದ್ದಾನೆ. ಅಷ್ಟು ಮಾಡದೆ ಹೋದರೆ ನನ್ನ ಆಣೆ ಎಂದರು. ಅವರೂ ಮಗಳ ಬಲವಂತಕ್ಕೆ ಅಲ್ಲೇ ಆ ಮಧ್ಯಾಹ್ನ ಊಟಕ್ಕೆ ನಿಂತರು. ಪಾಪ ಉಣ್ಣುವಾಗ ಮೊಮ್ಮಗನ ಬಾಯಿಯ ತುತ್ತೊಂದು ಕಡಿಮೆಯಾಗಿ ತನ್ನ ಗಂಟಲನ್ನು ಸೇರುತ್ತಿದೆ ಎಂಬ ಭಾವನೆ ಬಂತು. ಮುಂದೆ ಊಟ ಮಾಡುವುದಕ್ಕೆ ಅವರಿಗೆ ಆಗಲಿಲ್ಲ. ಊಟದ ನಡುವಿನಲ್ಲಿ ಸರಸೋತಮ್ಮ ಈ ಸಂಸಾರ ಎನ್ನುವುದೇನು ? ದೇವರು ಯಾಕೆಂದು ಮಾಡಿದನೋ ? ಎಂದರು. ಈ ತನಕ

ಅವರಲ್ಲಿ ಈ ತೆರನ ಮರುಕ ಮೂಡಿರಲಿಲ್ಲ. ಇಂದು ಮಾಡಿದ ಈ ಚಿಂತೆ ಅವರ ಕೊನೆಯ ತನಕವೂ ಅಳಿಸಿಹೋಗಲಿಲ್ಲ.'' [೨೧] (ಪು-೨೪೮)

ನಾಗವೇಣಿಯು ತನ್ನ ತಂದೆ ಬಂದಾಗ ಯಾವೊಂದು ವಿಶೇಷ ಮಾತನ್ನು ಆಡದೇ ನೋವಿನ ಲೋಕದಲ್ಲಿ ವಿವರಿಸುತ್ತ ಹಸುಗಳನ್ನು ಮೇಯಿಸುತ್ತಿದ್ದಳು. ತಂದೆಯು ನಾಗವೇಣಿಯನ್ನು ಇರುವ ಮಗನೊಬ್ಬನೊಂದಿಗೆ ತವರು ಮನೆಗೆ ಬಾ ಎಂದು ಕರೆದುದನ್ನು ನೆನೆಸಿಕೊಂಡು ತಂದೆಯ ಮುಖವನು ನೋಡಿ ಕಣ್ಣೀರ್ಗ್ಗರೆದು ಆದರೆ 'ಅವರಿಗೆ ಯಾರಿದ್ದಾರೆ ಈ ವಯಸ್ಸಿನಲ್ಲಿ ಅವರಿಬ್ಬರು ಬೇರೆಯೊಬ್ಬರ ಋಣಕ್ಕೆ ಬಿದ್ದರೇನು' ಎಂದಳು.

ವಾಸುದೇವಯ್ಯನ ಮನದಲ್ಲಿ ಮಗಳ ಬಗ್ಗೆ ಹೆಮ್ಮೆ ಉಕ್ಕಿ 'ಮಗೂ ನೀನು ಹೆಣ್ಣಾಗುವ ಬದಲು...ಗಂಡಾಗಿದ್ದರೆ ...?. ಎಂದೆನಿಸುತ್ತದೆ. ಮನೆಯ ಹಿರಿಯರ ಮೇಲಣ ಮಮತೆ ಗೌರವಗಳು ಇರುವಷ್ಟು ಬಲವಾಗಿಯೇ ತನ್ನ ದುರ್ಗತಿಗೆ ವಂಚನೆಯಿಂದ ತಂದಿರಿಸಿದ. ಬಲವಾಗಿಯೇ ತನ್ನ ದುರ್ಗತಿಗೆ ವಂಚನೆಯಿಂದ ತಂದಿರಿಸಿದ ಗಂಡನ ಮೇಲೆ ಸಿಟ್ಟಿದೆ. ತನ್ನ ಸೀರೆಗಳನ್ನು ಸಿಕ್ಕಿ ತೇಯ್ದಿಯಾದರೂ ಬಾಳ್ವೆ ಮಾಡಿತೋರುತ್ತೇನೆಂಬ ಹಠವಿದೆ. ಗಂಡನು ಕೈಬಿಟ್ಟರೂ ತಾವು ಸತ್ತಿಲ್ಲವೆಂದು ತೋರಿಸಬೇಕು. ಅವಳಿಗೆ ಎದುರಾಗುವ ಕಷ್ಟಕೋಟಲೆಗಳು ಸಾಮಾನ್ಯವೇನಲ್ಲ. ಡ್ರಾಕುಲದಂತೆ ಹೊಂಚು ಹಾಕಿ ದೈತ್ಯಾಕಾರವಾಗಿ ನಿಲ್ಲುತ್ತಿದ್ದವು. ಅವುಗಳನ್ನು ಎದುರಿಸಲು ತನ್ನೊಳಗಿರುವ ಸ್ಥೈರ್ಯ ಮೌಲ್ಯಗಳನ್ನು ಗಟ್ಟಿಮಾಡಿಕೊಳ್ಳುತ್ತಾ ತಾಳ್ಮೆಯಿಂದ ಪುಡಿ ಪುಡಿ ಮಾಡುತ್ತಿದ್ದಳು.

''ತನ್ನ ಸೊಸೆಯೊಂದು ದೇವತೆ'' ಎಂದು ಅವಳಿಗೂ ಕಂಡರು. ಮೇಲೆ ನಾಲ್ಕೇ ನಾಲ್ಕು ದಿನಕ್ಕೆ ತನ್ನ ಮನಸ್ಸು ನೆಮ್ಮದಿ ಕಾಣದೆ ಮಗಳ ಮನೆಗೆ ಹೋದುದಕ್ಕೆ ನಾಚುಗೆಯಾಯಿತು. ನಮ್ಮಂಥವರಿದ್ದೇನು ಫಲ ? ಅವಳು ಮಂಗಳೂರಿನಿಂದ ಬಂದ ಗಳಿಗೆಯಿಂದ ತಿರುಗಿ ತಂದೆಯ ಮನೆಗೆ ಹೋಗಲಿಲ್ಲ ಅಪ್ಪ. ಅಬ್ಬೆಯರು ಇಲ್ಲಿಗೆ ಬಂದು ಅವಳನ್ನು ನೋಡಿದ್ದಾರೆ ಹೊರತು ಐರೋಡಿಯಲ್ಲೂ ಒಂದು ರಾತ್ರಿಯನ್ನು ಅವಳು ಕಳೆಯಲಿಲ್ಲ ಅವಳ ಈ ತಪಸ್ಸು ವ್ಯರ್ಥ ಆಗದು'' [೨೨](ಪು- ೨೪೮)

ಸತ್ಯಭಾಮೆಯು ತನ್ನ ಸೊಸೆಯ ಮಾನವೀಯತೆಯ ಅಂಶಗಳನ್ನು ಕಂಡು ಮೇಲಿನ ಮಾತುಗಳಲ್ಲಿ ವ್ಯಕ್ತಮಾಡುತ್ತಾಳೆ.

ಕಾನೂರು ಹೆಗ್ಗಡತಿಯಲ್ಲಿ ಬರುವ ನಾಗಮ್ಮನವರು ಸುಬ್ಬಮ್ಮನಿಗೆ ಇರುವ ಚಟಗಳ ಬಗ್ಗೆ ತಿದ್ದಿಕೊಳ್ಳಲು ಪ್ರಯತ್ನಿಸಿದರೂ ಸುಬ್ಬಮ್ಮ ಕಲ್ಲು ನೀರು ಕರಗದಂತೆ ಇದ್ದಳು.

''ನಾಗಮ್ಮನವರು ಕೆಲವು ಸಾರಿ ಎಚ್ಚರಿಕೆ ಹೇಳಿದರೂ ಸುಬ್ಬಮ್ಮ ಹೊಟ್ಟೆ ಕಿಚ್ಚಿಗೇ ಹೇಳುತ್ತಾರೆಂದು ಊಹಿಸಿ ಅದನ್ನು ಲಕ್ಷ್ಯಕ್ಕೆ ತರಲಿಲ್ಲ. ಅದೂ ಅಲ್ಲದೆ ಗಂಗೆ ರುಚಿಯಾಗಿ ಮಾತಾಡುತ್ತಿದ್ದುದರಿಂದಲೂ ರುಚಿಯಾದ ಮಧ್ಯವನ್ನು ನೀಡುತ್ತಿದ್ದರಿಂದಲೂ ಆ ಪ್ರಲೋಭನದಿಂದಲೂ ಸುಬ್ಬಮ್ಮ ತಪ್ಪಿಸಿಕೊಳ್ಳಲಾಗಲಿಲ್ಲ. ಗಂಗೆಯ ಬಿಡಾರಕ್ಕೆ ಹೋಗಿ ಮಾತುಕತೆಯಾಡಿ ಬೇಜಾರು ಪರಿಹರಿಸಿಕೊಂಡು ಬರುವುದರಲ್ಲಿ ಆಕೆಯ ಗ್ರಾಮ್ಯ ಬುದ್ಧಿಗೆ ಯಾವ ದೋಷವೂ ತೋರಲಿಲ್ಲ. ಚಂದ್ರಯ್ಯಗೌಡರಿಗೆ ಈ ವಿಷಯ ಗೊತ್ತಾದರೂ ಗಂಗೆಯ ದಾಕ್ಷಿಣ್ಯಕ್ಕಾಗಿ ಸುಮ್ಮನಿದ್ದರು. ಆದರೂ ಅವರ ಹೃದಯಾಂತರಾಳದಲ್ಲಿ ಕಳವಳವಿಲ್ಲದಿರಲಿಲ್ಲ.'' [೨೩] (ಪು-೧೪೪).

ಗ್ರಾಮಾಯಣ ಕಾದಂಬರಿಯಲ್ಲಿ ಹೊಟ್ಟೆಗೆ ಇಲ್ಲದೆ ಸಾಯುತ್ತಿದ್ದ ಊರಿನ ಜನರಿಗೆ ಕಾಳನ್ನು ಕೊಡದಿದ್ದ ಗೌಡನಿಗೆ ಯಾವರೀತಿ ಅಂತಃಕರಣವು ವಿಕಾಸವಾಗಿದೆ ಎಂಬುದನ್ನು ಕೆಳಗಿನ ಸಂದರ್ಭದಲ್ಲಿ ತಿಳಿಯಬಹುದು.

''ಅಂದಿನ ರಾತ್ರಿ ಶಂಕರಪ್ಪ ಗೌಡರಿಗೆ ನಿದ್ದೆಯೇ ಹತ್ತಲಿಲ್ಲ. ತಮ್ಮ ಸ್ವಾರ್ಥದ ಪರಿಣಾಮವಾಗಿ ಪಾದಳ್ಳಿಯೇ ಉಪವಾಸ ಬೀಳುವಂತಾಯಿತಲ್ಲ'' ಬೆಳಗಿನಲ್ಲಿ ಹೊಟ್ಟೆಗಿಲ್ಲದೆ ಕಾಳು ಕೇಳಲು ಬಂದ ಬಡವರ ಕರುಣಾಚಿತ್ರ ಗೌಡರ ಕಣ್ಣ ಮುಂದೆ ಇನ್ನೂ ಇತ್ತು. ಗೌಡರಂದು ಊರನ್ನೇ ಕಾಯುವ ಹೊಣೆಹೊತ್ತ ತಮ್ಮನಲ್ಲದೆ ಅವರು ಇನ್ನಾರನ್ನು ಕೇಳಬೇಕು ? ಆದರೆ ಅಭಿಮಾನವೊಂದು ಅಡ್ಡಗೋಡೆಯಾಗಿ ಬಂದಿತ್ತು. ಉಪವಾಸವಿದ್ದ ಜನರಿಗೆ ಕಾಳುಕೊಡಿಸಲು ತಾವು ಅಸಮರ್ಥರಾದೆವಲ್ಲ ಎಂದು ಅವರಿಗೆ ಅಪಾರ ವ್ಯಥೆಯಾಯಿತು.''[೨೪] (ಪು-೩೩)

'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿ ನಾಗವೇಣಿಗೆ ತನ್ನ ಗಂಡ ದೂರ ಸರಿದಾಗಿನಿಂದ ಅವಳ ಭವಿಷ್ಯವು ನಿಂತ ನೀರಿನಂತಾಗಿದ್ದು 'ಹರಿವ ಜೀವ ನದಿ ನಿಲ್ಲದಂತೆ' ಏನು ಮಾಡಬೇಕೆಂಬುದನ್ನು ಯೋಚಿಸುತ್ತಾಳೆ. ''ತನಗೊಬ್ಬ ಗಂಡನಿರುವ' ಅವನು ತನ್ನನ್ನು ಈ ಗತಿಗೆ ತಂದ. ಬಾಳ್ವೆಯಲ್ಲಿ ಅನೇಕರು ಸುಖಿಗಳಾಗಿದ್ದಾರೆ. ತನ್ನ ಬಾಳ್ವೆ ಈ ಗಂಡನಿಂದ ಮಣ್ಣುಗೂಡಿತು'' ತಾನೀಗ ಇಪ್ಪತ್ತೈದು ವಯಸ್ಸಿನವಳು. ಇನ್ನೂ ಮುಂದೆ

ತಾನು ಬದುಕಬೇಕಾದ ಹಲವು ದಿನಗಳಿವೆ. ಅವನ್ನು ಹೀಗೆಯೇ ಕಾಗದ ಮುಗುಚಿ ಪರರ ಬಾಳ್ವೆಯ ಕತೆಗಳನ್ನು ಓದಿ ತನ್ನದು ಬರಿದಾಯಿತು ಎಂದು ನೆನೆದು ಕಳೆಯಬೇಕಾಗಿದೆ. ತನ್ನದೊಂದು ಕೂಸಿದೆ. ಅದು ಇಂದು ಅಜ್ಜನ ಆಸರೆಯಿಂದ ಬೆಳೆಯುತ್ತಿದೆ. ಅದು ನಾಳೆ ಏನಾಗಬೇಕೋ ? ತಾನೇನಾಗಬೇಕೋ ? ಎಂಬ ಇದೇ ಯಾವತ್ತು ಅನಿಶ್ಚತತೆಯ ತೆರೆಗಳ ಕಡೆಗೆ ಮುಖ ಮಾಡಿಕೊಂಡು ಎಣಿಕೆ ಹಾಕುತ್ತಾಳೆ. ಹೀಗೆಯೇ ತಾನಿದ್ದರೆ ತನ್ನ ಬಾಳ್ವೆಯು ಈ ಒಳಗಿಚ್ಚಿನ ಉರಿಯಲ್ಲಿ ಕರಗಿ ಹೋದೀತು. ರಾಮನು ಒಂದು ದಿನ ಹಿರಿಯನಾಗಿ ತಲೆಯೆತ್ತುವ ಗಳಿಗೆಗೆ ತಾನು ಮಾತ್ರ ಉರಿದು ಬೂದಿಯಾದೇನು - ಅಲ್ಲಿಯ ತನಕ ಬದುಕಿ ಉಳಿಯಬೇಕು.

ಆ ಮಗುವು ಯಾರಿಲ್ಲದ ತಬ್ಬಲಿಯಾಗಿ ಬದುಕಬಾರದು. ಅದು ಬಾಳುವಾಗ ಇಲ್ಲಿನಾನಿದ್ದೇನೆ. ಯೋಚಿಸಬೇಡ' ಅನ್ನಬೇಕು. ಎಂಬ ಆಸೆಯಿಂದಾದರೂ ಬದುಕಬೇಕು ಎನ್ನಿಸುತ್ತದೆ. ಆದರೆ ತಾನು ಇನ್ನು ಕನಿಷ್ಠ ಇಪ್ಪತ್ತೈದು ವರ್ಷಗಳ ಕಾಲ ಈ ತೆರನಾಗಿ ಉದ್ಯೋಗವಿಲ್ಲದೆ ತನ್ನದೇ ಗತಿಯಿಲ್ಲದೆ ಬದುಕಲು ಸಾಧ್ಯವೇ - ಎಂದು ಮೇಲಿಂದ ಮೇಲೆ ಅನುಮಾನ ಹೊಳೆಯುತ್ತಿತ್ತು.''[೨೫] (ಪು-೨೮೭)

ನಾಗವೇಣಿಗೆ ಬೇಸರವಾಗುತ್ತದೆಂದು ತಿಳಿದು ಅವರ ಅಣ್ಣ ಸದಾಶಿವ ಪಿಟೀಲು ನುಡಿಸುವ ಸಂಗೀತ ವಿದ್ಯೆಗೆ ಕರೆದುಕೊಂಡು ಹೋದನು. ಅಲ್ಲಿ ಅವಳಿಗೆ ಆಸಕ್ತಿ ಮೂಡಿ ಮುಂದೆ ಸುಬ್ರಾಯ ಎಂಬ ಸಂಗೀತ ವಿದ್ವಾಂಸನ ಕರುಣೆಗೆ ಪಾತ್ರಳಾದಳು. ನಾಗವೇಣಿಯ ಅಣ್ಣನ ಮನೆಯಲ್ಲಿರುವ ಪರಿಸ್ಥಿತಿಯನ್ನು ಕಂಡು ತನ್ನ ಮಗ ರಾಮನಿಗೆ ಸ್ಕೂಲು ಫೈನಲ್ ಪರೀಕ್ಷೆಗೆ ಕುಳಿತುಕೊಳ್ಳಲು ಹನ್ನೆರಡು ರೂಪಾಯಿಗಳನ್ನು ಸದಾಶಿವನನ್ನು ಕೇಳಿ, ಮತ್ತೊಬ್ಬ ಅಣ್ಣನಾದ ಚಿದಾನಂದನದಲ್ಲಿ ಕೇಳಿ ಪಡೆದಳು. ಆದರೆ ಅತ್ತಿಗೆಯ ಮೇಲೆ ದೂರು ಕೊಡಲು ಒಲ್ಲಳು. ನಾಗವೇಣಿ ತನ್ನ ಮಗನನ್ನು ಕೂರಿಸಿಕೊಂಡು ಗಂಡಮಾಡಿದ ಎಲ್ಲಾ ವಿಚಾರಗಳನ್ನು ಕಡಲಿನ ಬೋರ್ಗರೆತದಂತೆ ಸಾರಿದಳು. ಕೊನೆಯಲ್ಲಿ 'ನೀನೊಬ್ಬನಿಗೆ ನಿನಗೋಸ್ಕರ ನಾನು ಬದುಕಿರುವುದು ನೀನು ಮಾತ್ರ ಕೈ ಬಿಟ್ಟರೆ... 'ಎಂದಳು. ಅಮ್ಮ ನನ್ನನ್ನೂ ನಂಬು. ಅವರ ಹಾಗೆ ನಾನೆಂದು ಮಾಡುವುದಿಲ್ಲ. ಎಂದು ಕೈಯನ್ನಿರಿಸಿದನು.

'ಮಾಧವಕೃಷ್ಣಿಯು ಇವರಿಬ್ಬರ ಮಾನವೀಯ ವ್ಯಕ್ತಿತ್ವ ದೊಡ್ಡದು ರಾಮನು ಕೊಡುತ್ತಿದ್ದಹಣವನ್ನು ಗೊತ್ತಿಲ್ಲದಂತೆ ಅಕ್ಕ ನಾಗದವೇಣಿಗೆ ಕೃಷ್ಣೆ ಕಳುಹಿಸುತ್ತಿದ್ದಳು.

ಕಾಲಾನಂತರದಲ್ಲಿನಾಗವೇಣಿಗೆ ತನ್ನ ಮಾವನ ಮನೆಯ ಗೋಡೆಯಲ್ಲಿ ಕುಡಿಕೆ ಹಣ ಸಿಕ್ಕಿದೆ. ಇದನ್ನುಕಂಡು ತನ್ನ ಮಗನಿಗೆ 'ನೀನು ಅಲ್ಲೇನು ದುಡಿಯುವುದು ಬೇಡ ಕಷ್ಟವಾದರೆ ಬಂದು ಬಿಡು. ಸ್ವಲ್ಪ ಹಣ ಸಿಕ್ಕಿದೆ. ನಿಮ್ಮ ತಾತನ ಎಂದು ಹೇಳಿದಳು. ಮಗ ರಾಮನು ಮತ್ತೆ ತನ್ನ ಮಣ್ಣಿಗೆ ಮರಳಿ ಅಪ್ಪ ಕಳೆದಂತಹ ಆಸ್ತಿಯನ್ನೆಲ್ಲ ಮತ್ತೆ ಗಳಿಸಿ ತನ್ನ ತಾತನ ಆತ್ಮಕ್ಕೆ ಶಾಂತಿ ಬರುವಂತೆ ಬದುಕಿರುವ ಅಮ್ಮನಿಗೂ ಜೀವ ಉಳಿಸುವಂತೆ ಮಾನವೀಯ ಸಾಗರದಲ್ಲಿ ಮುಳುಗಿದರು. ತನ್ನ ಅಜ್ಜನ ಹೆಸರನ್ನು ಹೊತ್ತ ರಾಮ ಕಾದಂಬರಿಯ ಒಟ್ಟು ವಿಸ್ತೃತ ಪ್ರಲಾಪಕ್ಕೆ ಒಂದು ಮಾನವೀಯ ಮೆರಗನ್ನು ಕೊಡುತ್ತಾನೆ. ಕಾದಂಬರಿಯು ನಮಗೆ ಮುಕ್ತಾಯಗೊಂಡಿದೆ ಎನಿಸುವುದಿಲ್ಲ.

ಹೀಗೆ ಮಾನವೀಯ ಸಂಬಂಧಗಳು ಎನ್ನುವುದು 'ಈರುಳ್ಳಿಯ ಅಲಗುಗಳಂತೆ' ಇರುತ್ತವೆ. ಅವು ಕೆಲವೊಂದು ಪ್ರಬಲ ಸನ್ನಿವೇಶಗಳಿಗೆ ಚಂಚಲಗೊಳ್ಳುತ್ತಿರುತ್ತವೆ. ಹಾಗೂ ಸ್ಥಿರವೂಗೊಳ್ಳುತ್ತಿರುತ್ತವೆ. ಯಾವೊಂದು ಮಾನವೀಯ ಸಂಬಂಧಗಳು ಎನ್ನುತ್ತೇವೋ ಅವು ಸ್ಥಿರಗೊಂಡ ಚೇತನಗಳಾಗಿರುತ್ತವೆ. ಈ ಚೇತನಾಶಕ್ತಿಗಳೇ ಮಾನವೀಯ ಸಂಬಂಧಗಳಿಗೆ ಕಾಂತಿಯ ಸಂವರ್ಧನೆಯನ್ನು ಕೊಟ್ಟ ಹೊಣೆಗಾರಿಕೆ ಎಂಬುದನ್ನು ನಿಭಾಯಿಸಲು ಪ್ರೇರೇಪಿಸುತ್ತಿರುತ್ತವೆ.

ಅಡಿಟಿಪ್ಪಣಿ

೧. ಡಾ. ಕೆ. ಶಿವರಾಮ ಕಾರಂತ, 'ಮರಳಿ ಮಣ್ಣಿಗೆ' ಕಾದಂಬರಿ. ಸ್ವಪ್ನಬುಕ್‌ಹೌಸ್, ಬೆಂಗಳೂರು, ಮೇ ೨೦೦೬, ಮರುಮುದ್ರಣ. ಪು-೧೪೫.

೨. ಅದೇ ಪು-೧೬೪

೩. ಅದೇ ಪು-೧೬೯

೪. ಅದೇ ಪು-೧೭೦

೫. ಅದೇ ಪು-೧೭೦

೬. ಅದೇ ಪು-೧೭೦-೧೭೧

೭. ಅದೇ ಪು-೧೭೨

೮. ಅದೇ ಪು-೧೯೨-೧೯೩

೯. ಅದೇ ಪು-೨೦೦

೧೦. ಅದೇ ಪು-೩೦೦

೧೧. ಅದೇ ಪು-೨೦೪

೧೨. ಅದೇ ಪು-೨೦೫

೧೩. ಅದೇ ಪು-೨೦೮

೧೪. ಅದೇ ಪು-೨೦೮

೧೫. ಅದೇ ಪು-೨೨೨

೧೬. ಅದೇ ಪು-೨೨೩

೧೭. ಅದೇ ಪು-೨೨೭

೧೮. ಅದೇ ಪು-೨೨೮

೧೯. ಅದೇ ಪು-೨೨೯

೨೦. ಅದೇ ಪು-೨೩೦

೨೧. ಅದೇ ಪು-೨೪೮

೨೨ ಅದೇ ಪು-೨೪೮

೨೩. ಕುವೆಂಪು, 'ಕಾನೂರು ಹೆಗ್ಗಡಿತಿ', ಕಾದಂಬರಿ. ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೨ನೇ ಮುದ್ರಣ, ೨೦೦೭. ಪು-೧೪೪.

೨೪. ರಾವ್‌ಬಹದ್ದೂರ, 'ಗ್ರಾಮಾಯಣ', ಕಾದಂಬರಿ, ಉಷಾಸಾಹಿತ್ಯಮಾಲೆ, ಮೈಸೂರು. ೩ನೇ ಮುದ್ರಣ, ೧೯೮೧. ಪು-೩೩

೨೫. 'ಮರಳಿ ಮಣ್ಣಿಗೆ' ಕಾದಂಬರಿ. ಪು-೨೮೭.

# ಅಧ್ಯಾಯ - ೭

## ಭಾಷೆ ಮತ್ತು ಕೃತಿ

ಯಾವುದೇ ಒಬ್ಬ ಲೇಖಕನು ತಾನುಂಡ ಅನುಭವವನ್ನು ಸವಿದ ಸಂವೇದನೆಯನ್ನು ಮತ್ತು ಭಾವನೆಯನ್ನು ಅಭಿವ್ಯಕ್ತಿಸುವುದೇ ಭಾಷೆಯ ಮುಖಾಂತರ. ಕೃತಿಯನ್ನು ಬರೆಯುವ ಲೇಖಕ ಆಯಾಯ ಸಾಂಸ್ಕೃತಿಕ ಪ್ರಾದೇಶಕ್ಕನುಗುಣವಾಗಿ ಭಾಷೆಯನ್ನು ಬಳಸುತ್ತಾನೆ. ರೂಪಕವಾಗಿಯೋ, ಸಾಂಕೇತಕವಾಗಿಯೋ, ಉಪಮೆ-ಪ್ರತಿಮೆಗಳ ಮೂಲಕ ಕೃತಿಯು ರಚಿಸಲ್ಪಟ್ಟಿರುತ್ತದೆ.

ಹೀಗೆ ಯಾವೊಂದು ಕೃತಿಯು ಭಾಷೆಯ ಉಡುಪನ್ನು ಧರಿಸಿಯೇ ಅನುಭವದ ಮೂಸೆಯ ಮೂಲಕ ಪರಿಪಕ್ವವಾಗಿ ಜನ್ಮತಾಳುತ್ತದೆ.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ''ಪದ್ಯಂ ಸಮಸ್ತ ಜನತಾ ಹೃದ್ಯಂ' ಎಂಬಲ್ಲಿಂದ 'ಪದ್ಯಂ ವದ್ಯಂ ಗದ್ಯಂ ಹೃದ್ಯಂ' ಎಬಲ್ಲಿವರೆಗೆ ನಡೆದು ಬಂದ ಕಥೆ ಮುಗಿಲಿಗೇರಿದೆ. ಪದ್ಯದ ಎಡೆಎಡೆಯಲ್ಲಿ - ಅದು ಪದ್ಯದ ಛಾಯೆಯನ್ನು ಹೊತ್ತಿರುವ ಕಾಲವೊಂದಿತ್ತು. ಇಪ್ಪತ್ತನೆ ಶತಮಾನದ ಅರುಣೋದಯಕ್ಕೆ 'ಗದ್ಯಂ ಹೃದ್ಯಂ' ಎಂದು ಮುಂಗೋಳಿಯಾಗಿ ಕೂಗಿದ ದಾರ್ಶನಿಕ ಕವಿ ಮುದ್ದಣ್ಣ.

ಪದ್ಯದ ಗದ್ದುಗೆಯಿಂದ ಗದ್ಯದ ಸಿಂಹಾಸನಕ್ಕೆ ತಂದವರು ಪ್ರತಿಭಾವಂತ ಲೇಖಕರು. ಅಂತಹ ಕಾರ್ಯವನ್ನು ಕೈಗೊಂಡ ಪ್ರತಿಭಾವಂತರಲ್ಲಿ ಶಿವರಾಮಕಾರಂತರು ಒಬ್ಬರು.

ಈ ಶತಕದ ಮೊದಲ ದಿನಗಳಲ್ಲಿ ಗದ್ಯ ಶೈಲಿಯ ಕುರಿತಾಗಿದ್ದ ಅಭಿಪ್ರಾಯ ಮುಂದೆ ಹೇಗೆ ಬದಲಾವಣೆ ಹೊಂದಿತು ಎಂಬುದನ್ನು ಕನ್ನಡದ ಹಿರಿಯರಾದ ಡಿ.ವಿ.ಜಿ.ಯವರ ''ಜೀವನ ಸೌಂದರ್ಯ ಮತ್ತುಸಾಹಿತ್ಯ'' ಗ್ರಂಥದ ದ್ವಿತೀಯ ಮುದ್ರಣದ ಮುನ್ನುಡಿಯಿಂದ ತಿಳಿಯಬಹುದು. ''ಈ ಉಪನ್ಯಾಸಗಳಲ್ಲಿರುವ ಸಾಹಿತ್ಯ ಪ್ರಶ್ನೆಗಳನ್ನು ಕುರಿತು ಇರುವ ನನ್ನ ಅಭಿಪ್ರಾಯಗಳು ಯಾವುವೂ ಈಚೆಗೆ ಬದಲಾವಣೆ ಹೊಂದಿರುವಂತಿಲ್ಲ. ಇನ್ನು ಭಾಷಾ ಶೈಲಿಯ ಮಾತು, ಈ ವಿಚಾರದಲ್ಲಿ ನನ್ನ ಮನಸ್ಸು ಕೊಂಚ ಬದಲಾಯಿಸಿರುವಂತೆ ಕಾಣುತ್ತದೆ. ನಮ್ಮ ಗ್ರಂಥದ ಭಾಷೆ ನಮ್ಮ ಸುಸಂಸ್ಕೃತ

ಜನರ ದಿನಚರಿಯ ಸಾಮಾನ್ಯ ಸಂಭಾಷಣೆಗಳಿಗೆ ಕೂಡಿದಷ್ಟು ಹತ್ತಿರ ಬರಬೇಕೆಂದು ನನ್ನ ಈಗಿನ ಅಭಿಪ್ರಾಯ ವಚನ ಗ್ರಂಥಗಳಲ್ಲಂತೂ ಅತಿ ಪಾಂಡಿತ್ಯದ ಗುರುತು ನಿಲ್ಲಬಾರದು. ವಾಕ್ಯಗಳು ಸಹಜವಾಗಿರಬೇಕು. ವಿದ್ಯಾವಂತನಾದವನ ಬಾಯಿಯಿಂದ ಸಹಜವಾಗಿ ಹೊರಟು ಬಂದಂತಿರಬೇಕು'' ಎಂದು ಹೇಳುತ್ತಾರೆ.

ಕಾರಂತರ ಗದ್ಯಶೈಲಿಯನ್ನು ಒಂದೊಂದು ಕೃತಿಯಲ್ಲೂ ಗದ್ಯದ ಒಂದೊಂದು ವಿಶಿಷ್ಟ ಶೈಲಿಯಾಗಿ ಬಳಸುತ್ತಾರೆ. ಅಂತಹ ವಿಶಿಷ್ಟ ಶೈಲಿಯನ್ನು ಹೊಂದಿರುವ ಗದ್ಯದ ಪರಿಯನ್ನು ಅವರ 'ಮರಳಿ ಮಣ್ಣಿಗೆ' ಕಾದಂಬರಿಯಿಂದ ವಿಶ್ಲೇಷಿಸೋಣ.

''ಆ ದಿನ ಸಂಜೆ ಐತಾಳರು ಮನೆಯ ಕಡೆಗೆ ಸಾಗಿದಾಗ ಹಿಗ್ಗು ಅಷ್ಟಿಷ್ಟಲ್ಲ. ತಾನೇ ಮಗನಾಗಿ ತಾನೇ ತಹಶೀಲ್ದಾರನಾಗಿ, ಜಗತ್ತನ್ನು ತುಳಿದಾಡುವಂತೆ ಅವರ ಮನಸ್ಸು ಉಲ್ಲಾಸದಿಂದ ಕುಣಿಯುತ್ತಿತ್ತು. ಅವರು ಅಳಿವೆಯನ್ನು ದಾಟುವಾಗ ಬಣ್ಣದ ಮೋಡಗಳು ತೆರೆತೆರೆಯಾಗಿ ಉರುಳುತ್ತಿದ್ದವು. ನಗುವ ನೀರಿನ ಅಲೆಗಳ ಕುಡಿಗಳು ಸೂರ್ಯನ ಜಳದಿಂದ ಕತ್ತಿಯ ಧಾರೆಗಳಾಗಿ ಹೊಳೆಹೊಳೆದು ಮಾಯವಾಗುತ್ತಿದ್ದವು. ನದಿಯ ನೀರು ಬಲು ತುಷ್ಟಿಯಿಂದ ತುಂಬಿ ಓಲಾಡಿ ಕಡಲನ್ನು ಚುಂಬಿಸುತ್ತಿತ್ತು.'' [೧] (ಪು- ೧೩೩).

ಐತಾಳರು ತನ್ನ ಮಗನ ಭವಿಷ್ಯದ ಕನಸನ್ನು ಕಾಣುವ ಪ್ರಸಂಗವನ್ನು ಉಲ್ಲಾಸದ ಪ್ರಕೃತಿ ವರ್ಣನೆಯೊಂದಿಗೆ ಕಾವ್ಯಾತ್ಮವಾಗಿ ಚಿತ್ರಿಸುತ್ತಾರೆ.

''ನೆಂಟರು ಚಪ್ಪರದಲ್ಲಿ ಕಾಲಿರಿಸಿದರೂ ಮೇಲುಪ್ಪರಿಗೆಯಿಂದ ರಂಜಿತವಾದ ಆ ಚಪ್ಪರದಲ್ಲಿ ಎಲ್ಲಿ ನೋಡಿದರೂ ಕೆಂದಾಳಗೊನೆಗಳು, ಅಡಿಕೆಗೊನೆಗಳು, ಬಾಳೆಯೆಲೆಗಳಿಂದ ಸಜ್ಜಿತವಾದ ಸಭಾಗೃಹ, ಚಿತ್ರಗಳಿಂದ ರಂಜಿತವಾದ ಎತ್ತರವಾದ ಮಂಟಪ, ವಕೀಲರು ಮಂಟಪ ಕಟ್ಟುವವರ್ನು ಉಡುಪಿಯಿಂದಲೇ ಕರೆಯಿಸಿದ್ದರು. ಸಾಲದುದಕ್ಕೆ ಉಡುಪಿಯಿಂದ ಕೃಷಿಯ ಮೇಳವು ಬಂದಿತ್ತು. ಮೇಳದ ಮೊದಲಿನ ಸಮ್ಮಾನವು ದಿಬ್ಬಣದ ಯಜಮಾನ ರಾಮ ಐತಾರಿಗಲ್ಲವೇ ?'' [೨] (ಪು- ೧೮೯)

ಲಚ್ಚನ ಮದುವೆಯ ಸಂಭ್ರಮವನ್ನು ಪ್ರಕೃತ ವರ್ಣನೆಯಿಲ್ಲದೆ ಕೃತಕ ವರ್ಣಗಳಿಂದ ಭಾಷೆಯನ್ನು ಸಾಮಾನ್ಯವಾದ ಜನರ ಬಳಕೆಯಲ್ಲಿ ಬಳಸುತ್ತಾರೆ.

''ಒನಕೆ ಚಿಗುರಿದ ದಿನ ಅವನಿಗೆ ಬುದ್ಧಿ ಬರುತ್ತದೆ''.

''ಹಸಿವಿಲ್ಲದವನಿಗೆ ಪಾಯಸ ಮಾಡಿ ಕರೆದಂತೆ''

''ನಿಂಬೆ ಹಣ್ಣಿನಂತೆ ಕಾಂತಿಯಿಂದ ತುಳುಕಿತು''

''ನನ್ನ ಸಾವಿನ ಗಳಿಗೆಗೆ ಮನೆಯ ಕಂಬವೇ ಗತಿ''

''ಸುಮ್ಮನೆ ಸುಂಕದವನ ಮುಂದೆ ಸುಖದುಃಖ ಹೇಳಿಕೊಂಡ ಹಾಗೆ ''

''ರಸ ಇರುವ ತನಕ ಹಿಂಡುವ ಗಾಣಕ್ಕೆ ಯಾವ ದಯೆ, ಯಾವ ಕರುಣೆ!''

ಕಾರಂತರು ಗಾದೆಗಳನ್ನು, ರೂಪಕಗಳನ್ನು, ನಾಣ್ಣುಡಿಗಳನ್ನು ಬಳಸುತ್ತಾರೆ.

ಕುವೆಂಪುರವರು ತಮ್ಮ ಭಾಷೆಯನ್ನು ಕೃತಿಯದವರಿತು ಬಳಸುತ್ತಾರೆ. ಸಂಸ್ಕೃತಾಬುಹಿಷ್ಪ ಭಾಷೆ ಇವರದಾಗಿದೆ. ಸಹೃದಯನಿಗೆ ಸವಿಯುವಷ್ಟು ಕಾಂತೀಯ ಭಾಷೆ ಅವರದು. 'ಕಾನೂರ ಹೆಗ್ಗಡಿತಿ' ಕಾದಂಬರಿಯಲ್ಲಿ ಬಳಸಿರುವ ಭಾಷೆಯನ್ನು ಗಮನಿಸಬಹುದು.

''ಆ ನಸುಗೆಂಪುಬಣ್ಣದ ಹಣೆಯ ಮೇಲೆ ಮೆತ್ತಿದಂತೆ ವಕ್ರವಿನ್ಯಾಸದಿಂದ ಶೋಭಿಸುತ್ತಿದ್ದವು. ಆ ನಸುಗೆಂಪು ಬಣ್ಣದ ಹಣೆಯ ಮೇಲೆ ಕಡುಗಪ್ಪು ಬಣ್ಣದ ಬಳ್ಳಿಗುರುಗಳು ರಮಣೀಯರ ಸೌಂದರ್ಯವನ್ನು ಮನಸ್ಸಿಗೆ ತರುವಂತಿತ್ತು. ಅದರ ಮುಖಭಂಗಿಯಲ್ಲಿ ಅಬಲತಾಭಾವ ಲೇಶವಾದರೂ ಇರಲಿಲ್ಲ.''[೩] (ಪು- ೧)

''ಹೊಟ್ಟೆಗೆ ಬೆಂಕಿ ಬೇರೆ ಬಿದ್ದಿದೆ''

''ಎಂಥಾ ಮುಂದ್ಹೋಗೋದಪ್ಪಾ ! ಗುಂಡಿನೋ ಏನೋ ! ಹಾಳದ್ದು ! ಅಲ್ಲಾ ಅದ್ರ ಹೊಟ್ಟೆ ಹಾಳಗಾಕೆ ಆ ರೀತಿ ಒಂದ್ಕೊಂಡಿದ್ದು ಯತ್ತ ಮುಖ ಹೋಯ್ತಪ್ಪ?''

''ತಡೀರಿ ಇಲ್ಲೇನೋ ಸಿಕ್ಕದ್ಹಂಗಾಗ್ತದೆ ...ಹೋ ಇಲ್ಲಿ ಬಿದ್ದವಳೆ ಲೌಡಿ''!

''ತಾಂಬೂಲದಿಂದ ದಾಡಿಮ ಬೀಜಗಳಂತೆ ಕೆಂಪಾಗಿದ್ದ ಅವರ ದಂತಪಂಕ್ತಿಯ ಸ್ವಲ್ಪಭಾಗ ಗೋಚರವಾಯಿತು.''

''ಉರಿಯುವ ಸೊಡರಿಲ್ಲದ ಮಣ್ಣಿನ ಹಣತೆ''

''ಹಳೆಯದಕ್ಕೆ ಹೊಸದಾದುದೆಲ್ಲವೂ ಸೌಂದರ್ಯವೇ !''

''ಒನಕೆಯಿಂದ ಹಿಟ್ಟು ಕುಟ್ಟುವಂತೆ ಗಂಗನ ಮೈಗೆ ಗುದ್ದಿ''

''ನಾಗಮ್ಮನವರು ವಿಷಸರ್ಪಿಣಿಯಂತೆ ತೋರುತ್ತಿದ್ದರು''

''ವಾಙ್ಮಯ ಮಾತ್ರವಾಗಿದ್ದ ಅಂಗಡಿಯ ವಾತಾವರಣ ಬರುಬರುತ ಶಬ್ಧಮಯವಾಗುತ್ತ ಬಂತು''

''ಕತ್ತಲೆಯ ಕರ್ಬಿಸಿಲಿನಲ್ಲಿ ಕರಗಿ ಕಣ್ಮರೆಯಾದನ''

ಕುವೆಂಪುರವರ ಭಾಷೆ ಕಾವ್ಯಮಯವಾಗಿದ್ದು, ಸಂದರ್ಭಕ್ಕನುಗುಣವಾಗಿ ರೂಪಕವಾಗಿ, ಇಲ್ಲವೆ ನಾಣ್ಣುಡಿ ಗಾದೆಯನ್ನು ಸಹ ಬಳಸುತ್ತಾರೆ.

'ಗ್ರಾಮಾಯಣ'ಕಾದಂಬರಿಯ ಭಾಷೆ ಜನಸಾಮಾನ್ಯರದ್ದಾಗಿದ್ದು ಗ್ರಾಮೀಣ ಸೊಗಡಿನ ಹುರುಪಿನಿಂದ ಕೂಡಿದೆ.

''ಲಗ್ನ ಆಗೂ ಹುಡುಗಿ ಒಳ್ಳೆಯದಾಗಲಿ ಅಂತ ಹೇಳಿದೆ. ನಾಯೇನಂತಾ ಆಡಬಾರದ್ದನ್ನು ಆಡಿದ್ನಿ''

''ಪುತಳೀಬಾಯಿಯ ರಕ್ಷಣೆಯಲ್ಲಿದ್ದ ಚಿಮಣಾಳ ರೂಪ ಹಾವಿನಹೆಡೆಯಲ್ಲಿಯ ರತ್ನದಂತೆ ಅಪಾಸ್ಯವಾಗಿತ್ತು.''

''ಯಂತ್ರದಂತೆ ಚಿಮಣಾ ದಾನವ್ವನನ್ನು ಅನುಸರಿಸಿದಳು''

''ಅವನನ್ನು ಕೆಣಕುವುದೆಂದರೆ ನಾಗರಹಾವನ್ನು ಕೆಣುಕಿದಂತೆಯೇ ಎಂದು ಅವನ ಗೆಳೆಯರೆಲ್ಲರ ಅನುಭವ''

''ಬರಗಾಲದ ಕರಿನೆರಳುಗಳು ಪಾದದಳ್ಳಿಯ ಕರಿನೆಲದ ತುಂಬ ವ್ಯಾಪಿಸಿದವು.''

''ನಿತ್ರೀ ಗಡಾನ ಹೋಗಿ ಹೋಳಿಗಿ ಮಾಡಿಕೊಂಡು ಹೊಲಕ್ಕೆ ಹೋಗವರ್ಧಾಂಗ ಹೊಂಟಿರಲ್ಲ?''

''ಪಾಪದ ಕೊಡಾ ತುಂಬುತನಾ ಉರದಬೀಳತಾನು ಆತ ''

'ಮಾಡಿದವರ ಪಾಪ ಆಡಿದವರ ಬಾಯಾಗ ಯಾಕ ?'

'ನೋಡು ಶೇಷಪ್ಪ ಊರಗಾರಕಿ ವ್ಯವಹಾರದೊಳಗ ಹಾಂಗೆಲ್ಲಾ ತಂತೀ ಕೆಟ್ಟ ಕೆಲಸ ಸಾಗೂದಲ್ಲ'

'ಊರ ಸುಟ್ಟರೂ ಹಣಮಪ್ಪ ಹೊರಗS ಅಲ್ಲ ! '

''ಸ್ವಾಮೇರ ಮೊದಲು ಆ ಹಾವಿನ್ನ ಹೊರಗೆ ಹಾಕಿ ಅವನ ನೆತ್ತರ ಮಟದಾಗ ಬೀಳೋದುಬ್ಯಾಡ'' ಎಂದು ದಾದಾ ಗುಡುಗಿದ.

''ಸುಮ್ಮನ ಜೀವಾ ಹೊಡೆದು ಪಾಪದ ಹೊರಿ ಕಟಗೋಬಾರದು''

''ಮುಳ್ಳಿನಿಂದ ಮುಳ್ಳನ್ನು ತೆಗೆಯುವಂತೆ ಪಾಪದಿಂದಲೇ ಪಾಪಕೃತ್ಯವನ್ನು ಬಯಲಿಗೆಳೆಯಬೇಕಾಗುತ್ತದೆ''

''ಕಾದಂಬರಿಯಲ್ಲಿ ರಾವ್ ಬಹದ್ದೂರರವರು ಗ್ರಾಮೀಣ ಭಾಷೆಯನ್ನು ಬಳಸಿಕೊಂಡು ಗಾದೆ ನಾಣ್ಣುಡಿ ಮತ್ತು ರೂಪಕಗಳನ್ನು ನವ್ಯಸಂಕೇತಗಳನ್ನು ಚಿತ್ರಿಸಿದ್ದಾರೆ.

ಹೀಗೆ ಕೃತಿಯೊಂದು ತನ್ನದೇ ಆದ ಭಾಷೆಯನ್ನು ಹೊಂದಿದ್ದು ತನ್ನದೇ ಆದ ಸಾಂಸ್ಕೃತಿಕ ಸಂಚಲನೆಯನ್ನು ಸಹೃದಯನಿಗೆ ಉಂಟುಮಾಡುತ್ತಿರುತ್ತದೆ.

ನವ್ಯಕಾಲದಲ್ಲಿ ಒಡಮೂಡಿದ ಕೃತಿಗಳ ಭಾಷೆ ಅರ್ಥವಾಗುವುದಿಲ್ಲ ಎನ್ನುವ ಮಾತು ಆಗಾಗ್ಗೆ ಕೇಳಿಬರುತ್ತದೆ. ಇದಕ್ಕೆ ಕಾರಣ ಅವರು ಕೃತಿಯಲ್ಲಿ ಬಳಸುವ ಭಾಷೆಯ ಪರಿ ಆ ರೀತಿಯಾಗಿರುತ್ತದೆ. ಅಡಿಗರ ಬಹುತೇಕ ಕವನಸಂಕಲನಗಳು ಭಾಷೆಯ ಸಂಕೇತ, ಪುರಾಣ ಪ್ರತಿಮೆಗಳಿಂದ ಕೂಡಿದ್ದು ವರ್ತಮಾನಕಾಲದ ಸಂವೇದನೆಯೊಂದಿಗೆ ಸ್ಪರ್ಶಿಸುವುದರ ಮೂಲಕ ವಿಚಾರಗಳನ್ನು ಹೇಳಲು ಬಯಸುತ್ತವೆ.

ಅದೇ ರೀತಿ ದೇವನೂರ ಮಹಾದೇವರ 'ಒಡಲಾಳ ಕಥೆಗಳು' ಮತ್ತು 'ಕುಸುಮಬಾಲೆ' ಈ ಕೃತಿಗಳ ಭಾಷೆ ನಂಜನಗೂಡಿನ ದಲಿತ ಸಹೃದಯ ಸಂವೇದನೆಯಿಂದ ಮೂಡಿದುದಾಗಿದೆ. ಈ ಕಾದಂಬರಿಗಳು ಕೃತಿಯ ರೂಪದಲ್ಲಿ ಅವತರಿಸಿದಾಗ ಬಹುತೇಕ ಲೇಖಕರ ಅಭಿಪ್ರಾಯ. ದೇವನೂರರವರ ಕೃತಿಗಳ ಭಾಷೆ ಅರ್ಥವಾಗುವುದಿಲ್ಲ ಎನ್ನುತ್ತಲಿದ್ದರು.

ಕುವೆಂಪುರವರ ನಾಟಕ ಭಾಷೆಯು ಹಳಗನ್ನಡ - ಸಂಸ್ಕೃತಭಾಷೆಯಿಂದ ಕೂಡಿದೆಂದು ಕೆಲವು ಲೇಖಕರು -ಸಹೃದಯರು ಹೇಳುತ್ತಿದ್ದುದ್ದುಂಟು. ಕೆಲವರು ಹೊಸಗನ್ನಡಕ್ಕೆ ಭಾಷಾಂತರ ಮಾಡಬೇಕು. ಕುವೆಂಪು ನಾಟಕಗಳನ್ನು ಅನ್ನುತ್ತಲೇ ಹೊಸಗನ್ನಡಕ್ಕೆ ಭಾಷಾಂತರ ಮಾಡಲು ಪ್ರಯತ್ನಿಸಿದ್ದುಂಟು. ಏಕೆ ಹಾಗಾಗುತ್ತದೆ ಎಂದರೆ ಯಾವೊಬ್ಬ ಕವಿಯ/ಲೇಖಕ ಆಯಾಯ ಪ್ರಾದೇಶಿಕ ಸಾಂಸ್ಕೃತಿಕ ಪರಿಣಿತ ಭಾಷೆಯಲ್ಲಿ ಬಳಸುವುದೇ ಪ್ರಮುಖ ಕಾರಣವಾಗುತ್ತವೆ.

### ಅಡಿಟಿಪ್ಪಣಿ

೧. ಡಾ. ಶಿವರಾಮ ಕಾರಂತ, 'ಮರಳಿ ಮಣ್ಣಿಗೆ', ಕಾದಂಬರಿ. ಸಪ್ನ ಬುಕ್‌ಹೌಸ್, ಬೆಂಗಳೂರು, ಮೇ ೨೦೦೬. ಮರುಮುದ್ರಣ. ಪು-೧೩೩.

೨. ಅದೇ ಪು- ೧೮೯

೩. ಕುವೆಂಪು, 'ಕಾನೂರು ಹೆಗ್ಗಡಿತಿ', ಕಾದಂಬರಿ. ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೨ನೇ ಮುದ್ರಣ, ೨೦೦೭. ಪು-೧

# ಅಧ್ಯಾಯ - ೮

## ಉಪಸಂಹಾರ

ಕಾರಂತರ 'ಮರಳಿ ಮಣ್ಣಿಗೆ' ಕಾದಂಬರಿಯೊಂದಿಗೆ 'ಕಾನೂರು ಹೆಗ್ಗಡಿತಿ' 'ಗ್ರಾಮಾಯಣ' ಮತ್ತು ಕಾರಂತರ ಉಳಿದ ಕಾದಂಬರಿಗಳಾದ 'ಬೆಟ್ಟದ ಜೀವ', 'ಕನ್ಯಾಬಲಿ', 'ಸನ್ಯಾಸಿಯ ಬದುಕು', ಇತ್ಯಾದಿಗಳನ್ನು ಸಾಂದರ್ಭಿಕವಾಗಿ ಬಳಸಿಕೊಂಡು ಸಾಂಸ್ಕೃತಿಕವಾಗಿ ಚರ್ಚಿಸಿದ್ದೇನೆ.

'ಮರಳಿ ಮಣ್ಣಿಗೆ' ಕಾದಂಬರಿಯು ಕೆಲವು ಕೊರತೆಗಳನ್ನು ಹೊಂದಿದೆ. 'ಮದುವೆಯ ವಿಪರೀತ ವರ್ಣನೆ, ಇದರೊಂದಿಗೆ ಮಳೆಗಾಳಿಗಳ ಕೋಲಾಹಲಗಳನ್ನು ತಂದಿರುವುದು ಓದುಗನಿಗೆ ಬೇಸರವನ್ನುಂಟು ಮಾಡುತ್ತದೆ. ಶೀನನ ಸ್ವಭಾವ ನಿರೂಪಣೆ ರಂಜಿತವಾಗಿ ವರ್ಣಿತವಾಗಿರುವುದು, ಪಡುಕರಾವಳಿಯ ಜನರ ಬದುಕಿನ ವೃತ್ತಿಗಳ ನಾನಾಂಶದ ವಿವರಣೆಗಳು ಅನಾವಶ್ಯಕವಾಗಿ ಬಂದಿವೆ. ಕಾದಂಬರಿಯಲ್ಲಿ 'ಲಚ್ಚನ ಪಾತ್ರದ ವ್ಯಕ್ತಿತ್ವ'ಕ್ಕೆ ಹೆಚ್ಚು ಒತ್ತು ಕೊಟ್ಟಂತೆ ಭಾಸವಾಗುತ್ತದೆ.

'ಮರಳಿ ಮಣ್ಣಿಗೆ' ಕಾದಂಬರಿಯ ಪ್ರಭಾವವನ್ನು ಅದರ ನಂತರ ಬಂದ ಅನೇಕ ಕೃತಿಗಳಲ್ಲಿ ಗುರುತಿಸಬಹುದು. ಅನಂತಮೂರ್ತಿಯವರ 'ಸಂಸ್ಕಾರ' ಕಾದಂಬರಿಯು 'ಒಬ್ಬನೇ ಕೇಂದ್ರ ವ್ಯಕ್ತಿಯನ್ನಾಗಿಟ್ಟಕೊಂಡ' ಸಮಾಜದ ಮೂರು ಅವಸ್ಥೆಗಳನ್ನು ಕಾಲದ ಪರಿಮಿತಿಯನ್ನು ಕಿರಿದುಗೊಳಿಸಿಕೊಂಡ ರಚನೆಯಾಗಿದೆ.

ಕಾದಂಬರಿಯ ಕೊನೆಯು ರಾಮ ತಿರುಗಿ ಬಂದು ತಾಯಿಯನ್ನು ಭೂಮಿಯನ್ನೂ ಹೊಂದಿಕೊಳ್ಳುವುದು ಅನಿವಾರ್ಯವಾಗಿ ಗೋಚರಿಸುವುದಿಲ್ಲ. ನೌಕರಿಗಾಗಿ ಅಲೆದಾಡಿ ರಾಮ ಅನುಭವಿಸಿದ ಹತಾಶೆ ಅವನನ್ನು ತಿರುಗಿ ಭೂಮಿಗೆ ಬರುವಂತೆಯೇ ಮಾಡುತ್ತದೆಯೇ ಹೊರತು ಭೂಮಿಗೆ ಬರುವಂತೆಯೇ ಮಾಡುತ್ತದೆಯೇ ಹೊರತು, ಭೂಮಿಗೆ ಹೊಂದಿಕೊಳ್ಳುವುದರಲ್ಲೇ ಮೋಕ್ಷವಿದೆ ಎಂಬ ತಿಳುವಳಿಕೆ ಕಾರಣವಾಗುವುದಿಲ್ಲ. ಮನೆಯ ಹಾಳು ಗೋಡೆಯಲ್ಲಿ ಸಿಕ್ಕ ಹಣ ಊರಿಗೆ ತಿರುಗಿ ಬರುವ ಅವನ ನಿರ್ಧಾರವನ್ನು ಬಲಪಡಿಸಿದಂತೆ ಆಕಸ್ಮಿಕವಾಗಿ ಸಿಕ್ಕಿರಬಹುದಾದ ಒಂದು ನೌಕರಿ ಅವನನ್ನು ಮುಂಬಯಿಯಲ್ಲಿ ನಿಲ್ಲಿಸಬಹುದಾಗಿತ್ತು.

'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿ ಎಷ್ಟೋ ಕಡೆ ಮನಸ್ಸನ್ನು ಕಲಕುವಂಥ ಸನ್ನಿವೇಶಗಳು ಬಂದರೂ ಎಲ್ಲೂ ಭಾವಾತಿರೇಕ ಕಂಡುಬರುವುದಿಲ್ಲ. ತನ್ನ ಅನುಭವಕ್ಕೆ ಬಾರದ ಆದರೆ ಓದಿ ತಿಳಿದು ಕೇವಲ ಬುದ್ಧಿಗಿಂತವಾಗಿದ್ದರೂ ಮಾರುಕಟ್ಟೆಯಲ್ಲಿ ತಕ್ಕ ಬೆಲೆ ಬರುತ್ತದೆ. ಆದ್ದರಿಂದ ಉಪಯೋಗಗಳು ಎನ್ನುವಂಥ ಪೊಳ್ಳು ಆಧ್ಯಾತ್ಮಿಕತೆಯಾಗಲೀ ಅದರಿಂದ ಹುಟ್ಟುವ ಭಾಷೆಯಬ್ಬರವಾಗಲೀ ಈ ಕೃತಿಯಲ್ಲಿ ಇಲ್ಲ.

ಕಾರಂತರು ತಮ್ಮ ಕಾದಂಬರಿಗಳಲ್ಲಿ ಭಿನ್ನ-ಭಿನ್ನ ಶೈಲಿಯನ್ನು ಬಳಸುತ್ತಾರೆ. ವಾಸ್ತವವಾದಿ ನೆಲೆಯಲ್ಲಿ ಚಿಂತಿಸುವ ಇವರ ಕಾದಂಬರಿಗಳಲ್ಲಿ ಸಹಾನುಭೂತಿ, ಔದಾರ್ಯ 'ಸ್ನೇಹ', 'ಜೀವನಶ್ರದ್ಧೆ', 'ಕಷ್ಟಸಹಿಷ್ಣುತೆ' ಇಂತಹ ಸಾರ್ವತ್ರಿಕ ಮೌಲ್ಯಗಳೇ ಜೀವಾಳಗಳಾಗಿವೆ. ಇದರೊಂದಿಗೆ ಪ್ರಕೃತಿಯೂ ಸೇರಿಕೊಂಡಿದೆ.

ಕಾರಂತರು ಯಾವಾಗಲೂ ಸಹ ಬರಹ ಶೈಲಿಯಲ್ಲಿ ಸುಂದರವಾಗಿ ಬರೆಯಬೇಕು. ಆಕರ್ಷಕವಾಗಿ ಕಾಣಬೇಕು ಎನ್ನುವ ಚಪಲ ಹೊಂದಿದ್ದವರಲ್ಲ. ತಂತ್ರಕ್ಕಿಂತ ಅನುಭವ ಶೈಲಿಯ ಇವರ ಹುಟ್ಟುಗುಣ. ಆಯ್ದುಕೊಂಡ ವಿಷಯದಲ್ಲಿ ಏಕಾಗ್ರಮನಸ್ಕರಾಗಿ ಪಾತ್ರಗಳನ್ನು ಸೃಷ್ಟಿಸುತ್ತಾರೆ. ಕಾರಂತರ ಹೇಳುವಂತೆ 'ನಾನು ಜನಸಾಮಾನ್ಯರಿಗೆ ಅರ್ಥವಾಗುವಂತೆ ಭಾಷಾ ಶೈಲಿಯನ್ನು ಬಳಸುತ್ತೇನೆ. ಕಾರಣ ಕಾದಂಬರಿಯು ಅವರೂ ಓದುವಂತಾಗಲಿ ಎನ್ನುತ್ತಾರೆ.

ಕುವೆಂಪುರವರ 'ಕಾನೂರ ಹೆಗ್ಗಡಿತಿ'ಯಲ್ಲಿ ಫ್ಯೂಡಲ್ ವ್ಯವಸ್ಥೆಯ ವಿಚಾರವಿದ್ದರೂ ಅದರ ವೈರುಧ್ಯದ ಬಗ್ಗೆ ಅದರ ಶೋಷಣೆಯ ಬಗ್ಗೆ ಕಾದಂಬರಿ ಮೌನ ವಹಿಸಿರುವುದು ಆಶ್ಚರ್ಯಕರವಾಗಿದೆ.

ಕಾನೂರ ಹೆಗ್ಗಡಿತಿ' ಯಲ್ಲಿನ ಶೈಲಿ ಕಾವ್ಯಮಯವಾಗಿದ್ದು ಸಹೃದಯನಿಗೆ ತನ್ಮಯಗೊಳಿಸುತ್ತದೆ. ಪಾತ್ರಗಳ ಸಂದರ್ಭಕ್ಕೆ ತಕ್ಕಂತೆ ಪ್ರಕೃತಿವರ್ಣನೆ ಮತ್ತು ವೇದೋಪನಿಷತ್ತುಗಳ, ಪುರಾಣ ಭಾರತಗಳ ತಾತ್ವಿಕಾರ್ಥಿಕವಾಗಿ ಸುರಿಯುತ್ತವೆ.

'ಗ್ರಾಮಾಯಣ'ಕಾದಂಬರಿಯ ಭಾಷೆಯು ಗ್ರಾಮ್ಯವಾಗಿದ್ದು ವಾಕ್ಯಗಳಲ್ಲಿ ಪ್ಲುತಗಳು ಬಂದುಹೋಗುತ್ತವೆ. ಓದುಗನಿಗೆ ಸ್ವಲ್ಪಮಟ್ಟಿಗೆ ಅನುಭವವಿರಬೇಕೆಂದೆನಿಸುತ್ತದೆ.

ಗಾದೆಗಳು, ನಾಣ್ಣುಡಿಗಳು, ರೂಪಕಗಳು ಕಾದಂಬರಿಯಲ್ಲಿ ಹೆಚ್ಚು ಬಳಕೆಗೊಂಡಿವೆ. ಕಾದಂಬರಿಯಲ್ಲಿ ಕೆಡುಕಿಗೆ ಎಲ್ಲಾ ರೀತಿಯಲ್ಲಿ ಜಯ ದೊರೆಯುತ್ತಾ ಹೋಗುವುದನ್ನು ಗಮನಿಸಬೇಕು. ಪಾದಳ್ಳಿಯೆ ಮುಖ್ಯ ಕೇಂದ್ರ ಪ್ರದೇಶವಾಗಿದೆ. ಪ್ರವಾಹ-ಪ್ಲೇಗು - ಬಿರುಗಾಳಿಗಳಂಥ ವಾಸ್ತವಿಕ ಸಂಗತಿಗಳು ಸಾಂಕೇತಿಕವಾಗಿ ಬರುತ್ತವೆ. ಪಡದಯ್ಯ, ಬಾಪೂ ಸಾಹೇಬರರು ಮುಖ್ಯ ಕೆಡುಕಿನ ಪಾತ್ರಗಳುನಾಶವಾಗದಿರುವುದು ಶೋಚನೀಯ. ಇಲ್ಲಿನ ಕೆಡುಕು ತನ್ನ ದೌರ್ಬಲ್ಯದಿಂದ ನಾಶವಾಗುವುದಿಲ್ಲ. ಪ್ರಕೃತಿಯ ವಿಕೋಪಕ್ಕೆ ಗುರಿಯಾಗಿ ನಾಶವಾಗುತ್ತದೆ. ಕಾದಂಬರಿಯ ಲೇಖಕರಿಗೆ ಸಮಾಧಾನವನ್ನು ತಂದಂತಿಲ್ಲಎಂದು ಬೇರೆ ಹೇಳಬೇಕಾಗಿಲ್ಲ.

'ಮರಳಿ ಮಣ್ಣಿಗೆ', 'ಕಾನೂರು ಹೆಗ್ಗಡಿತಿ', 'ಗ್ರಾಮಾಯಣ', ಕಾದಂಬರಿಗಳೊಂದಿಗೆ ಚಿನವ ಅಚಿಬೆಯವರ - ದಿಂಗ್ಸ್‌ಪಾಲ್ ಅಪಾರ್ಟ್, ಪಥೇರ್‌ಪಾಂಚಾಲಿಯನ್ನಿಟ್ಟುಕೊಂಡು ಸಾಂಸ್ಕೃತಿಕವಾಗಿ ಚರ್ಚಿಸಬಹುದು.

ಕಾದಂಬರಿಗಳ ಪಯಣ ದೀರ್ಘವಾಗಿದ್ದು, ಅವಲೋಕಿಸಲು ತಾಳ್ಮೆ, ಸಂಯಮಗಳೆರಡೂ ಬೇಕಾಗುತ್ತದೆ. ಕಾಲಘಟ್ಟದಲ್ಲಿ ಕಾದಂಬರಿಗಳು ಎತ್ತುವ ಪ್ರಶ್ನೆಗಳು ಎಂತಹದು ಎಂಬುದನ್ನು ಚರ್ಚಿಸುವುದರ ಮೂಲಕ ಪ್ರಸ್ತುತಕ್ಕೆ ಅವುಗಳು ಹೇಳುವ ವಿಚಾರಗಳೇನೆಂದು ತಿಳಿಯಬೇಕಾಗುತ್ತದೆ.

ಇತ್ತೀಚೆಗೆ ಸಾಹಿತ್ಯಕೃತಿಗಳು - ಸಾಹಿತ್ಯ ವಿಮರ್ಶೆಯಾಗಿಯೇ ಸಾಕಷ್ಟು ಬರುತ್ತಿವೆ ಹೊರತು ಸಾಂಸ್ಕೃತಿಕ ವಿಮರ್ಶೆಯಾಗಿ ಅಲ್ಲ.

ಸಂಕ್ಷಿಪ್ತವಾಗಿ ಹೇಳುವುದಾದರೆ ನಾನು 'ಮರಳಿ ಮಣ್ಣಿಗೆ' ಕಾದಂಬರಿಯೊಂದಿಗೆ ಮುಖ್ಯವಾಗಿ 'ಕಾನೂರು ಹೆಗ್ಗಡಿತಿ', 'ಗ್ರಾಮಾಯಣ' ಕಾದಂಬರಿಗಳನ್ನಿಟ್ಟುಕೊಂಡು ಸಾಂದರ್ಭಿಕವಾಗಿ ಮಾಡಿರುವ ಸಾಂಸ್ಕೃತಿಕ ಚರ್ಚೆ 'ಬಾನಿನಲಿ ಹಾರುವ ಪಕ್ಷಿಯಂತೆ' ಎಂದೆನಿಸಿದೆ.

## ಅನುಬಂಧ


೧. ಡಾ. ಕೆ. ಶಿವರಾಮ ಕಾರಂತ : 'ಮರಳಿ ಮಣ್ಣಿಗೆ' (ಕಾದಂಬರಿ) ಸ್ವಪ್ನ ಬುಕ್ ಹೌಸ್, ಬೆಂಗಳೂರು, ಮರುಮುದ್ರಣ ಮೇ ೨೦೦೬.

೨. ಕು.ಶಿ. ಹರಿದಾಸಭಟ್ಟ (ಸಂ.) : 'ಕಾರಂತ ಪ್ರಪಂಚ', ಅಭಿನಂದಾ ಗ್ರಂಥ, ಕಾರಂತ ಅಭಿನಂದನ ಸಮಿತಿ ಪರವಾಗಿ, ಗೀತಾಬುಕ್‌ಹೌಸ್, ಮೈಸೂರು, ೧೯೬೯.

೩. ಬಿ. ಮಾಲಿನಿಮಲ್ಯ (ಸಂ.) : 'ಶಿವರಾಮ ಕಾರಂತರ ವಾಙ್ಮಯ ವೃತ್ತಾಂತ' ಡಾ. ಕೋಟ ಶಿವರಾಮಕಾರಂತರ ಸಮಗ್ರ ಸಾಹಿತ್ಯ ಸಾರ ಸಂಗ್ರಹ.

೪. ಜಿ.ಎಸ್. ಶಿವರುದ್ರಪ್ಪ (ಸಂ.) : 'ಕಾದಂಬರಿಕಾರರಾಗಿ ಕಾರಂತ', ಬೆಂಗಳೂರು ಕನ್ನಡ ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯ, ೧೯೮೩.

೫. ಟಿ.ಪಿ. ಆಶೋಕ್ ವಿಮರ್ಶಾಕೃತಿ : 'ಶಿವರಾಮಕಾರಂತರ ಕಾದಂಬರಿಗಳಲ್ಲಿ ಆಧುನೀಕರಣದ ಪ್ರಕ್ರಿಯೆ', ಪುತ್ತೂರು ಕರ್ನಾಟಕ ಸಂಘ, ೧೯೯೦

೬. ಶಿವರಾಮ ಕಾಡನಕುಪ್ಪೆ (ಸಂ.) : 'ಶಿವರಾಮಕಾರಂತ -ಹತ್ತು ಅಧ್ಯಯನಗಳು', ಭಾರತೀ ಪ್ರಕಾಶನ, ಮೈಸೂರು ೧೯೮೨.

೭. ಜಿ.ಎಸ್. ಶಿವರುದ್ರಪ್ಪ (ಪ್ರ.ಸಂ.) : 'ಸಾಧನೆ', ಬೆಂಗಳೂರು ವಿಶ್ವವಿದ್ಯಾಲಯದ ಪತ್ರಿಕೆ, ಸಂ. ೭. ಬೆಂಗಳೂರು ವಿ.ವಿ. ಬೆಂಗಳೂರು.

೮. ಟಿ.ಪಿ. ಅಶೋಕ್ ವಿಮರ್ಶಾಕೃತಿ : 'ಕಾರಂತ ಕಾದಂಬರಿಗಳಲ್ಲಿ ಗಂಡು-ಹೆಣ್ಣು' ಅಕ್ಷರ ಪ್ರಕಾಶನ, ಸಾಗರ. ೧೯೮೨.

೯. ಡಾ. ಗುರುಲಿಂಗಕಾಪಸೆ (ಸಂ.) : 'ಶಿವರಾಮಕಾರಂತ ಸಾಂಸ್ಕೃತಿಕ ಅನುಸಂಧಾನ', ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು. ೧ನೇ ಮುದ್ರಣ ೨೦೦೩.

೧೦. ಟಿ.ಪಿ. ಅಶೋಕ : 'ಶಿವರಾಮಕಾರಂತ ಎರಡು ಅಧ್ಯಯನಗಳು' ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ಕರ್ನಾಟಕ, ೪ನೇ ಮುದ್ರಣ ೨೦೦೪

೧೧. ಕುವೆಂಪು : 'ಕಾನೂರು ಹೆಗ್ಗಡತಿ', (ಕಾದಂಬರಿ) ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು. ೧೨ನೇ ಮುದ್ರಣ ೨೦೦೨

೧೨. ಟಿ.ಪಿ. ಅಶೋಕ : 'ಶಿವರಾಮಕಾರಂತ ಎರಡು ಅಧ್ಯಯನಗಳು' ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ ಕರ್ನಾಟಕ, ೪ನೇ ಮುದ್ರಣ, ೨೦೦೪

೧೩. ರಾವ್‌ಬಹಾದ್ದೂರ : 'ಗ್ರಾಮಾಯಣ', ಉಷಾಸಾಹಿತ್ಯ ಮಾಲೆ, ಮೈಸೂರು, ೩ನೇ ಮುದ್ರಣ ೧೯೮೧

೧೪. ಡಾ. ಹಾ.ಮಾ.ನಾಯಕ್ (ಸಂ.) ಡಾ. ಸಿ.ಪಿ. ಕೃಷ್ಣಕುಮಾರ್ ಡಾ. ಟಿ.ವಿ. ವೆಂಕಟಾಚಲಶಾಸ್ತ್ರಿ : 'ಸ್ವಸ್ತಿ ', ತನುಶಾಮರಾಯರ ಅಭಿನಂದನ ಗ್ರಂಥ, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು ೧ನೇ ಮುದ್ರಣ ೧೯೮೩.

೧೫. ವಿ.ಎಂ. ಇನಾಂದರ : 'ಶಿವರಾಮಕಾರಂತ -ಬದುಕು ಬರಹ', ರಾಷ್ಟ್ರಕವಿ ಗೋವಿಂದಪೈ ಸಂಶೋಧನ ಕೇಂದ್ರ, ಉಡುಪಿ ೧೯೯೮

೧೬. ಡಿ.ಆರ್. ನಾಗರಾಜ : 'ಅಮೃತ ಮತ್ತು ಗರುಡ', ಅಕ್ಷರ ಪ್ರಕಾಶನ ಹೆಗ್ಗೋಡು, ಸಾಗರ, ಕನಾಟಕ ೩ನೇ ಮುದ್ರಣ. ೧೯೯೮.

